

# ಬೀದರ ಜಿಲ್ಲೆಯ ಶರಣರ ಸ್ಮಾರಕಗಳು - ಒಂದು ಐತಿಹಾಸಿಕ ನೋಟ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

**ಪ್ರಭು ಶಿವರಾಜ**

ಸಂಶೋಧನಾ ಮಾರ್ಗದರ್ಶಕರು

**ಡಾ. ಬಿರಾದಾರ ಶ್ರೀಶೈಲ**

ಎಂ.ಎ. ಎಂ.ಫಿಲ್. ಪಿ.ಹೆಚ್.ಡಿ

ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.





ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬
ಸೆಪ್ಟೆಂಬರ್ - ೨೦೦೯



# ಬೀದರ ಜಿಲ್ಲೆಯ ಶರಣರ ಸ್ಮಾರಕಗಳು - ಒಂದು ಐತಿಹಾಸಿಕ ನೋಟ

(ಕ.ರಾ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ
ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

**ಪ್ರಭು ಶಿವರಾಜ**




ಸಂಶೋಧನಾ ಮಾರ್ಗದರ್ಶಕರು

**ಡಾ. ಬಿರಾದಾರ ಶ್ರೀಶೈಲ**

ಎಂ.ಎ., ಎಂ.ಫಿಲ್., ಪಿ.ಎಚ್.ಡಿ.

ಕ.ರಾ.ಶಿ. ಸಂಸ್ಥೆಯ
ಸ್ನಾತ್ತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.



**ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬**

ಸೆಪ್ಟೆಂಬರ್ - ೨೦೦೯

## ಘೋಷಣಾ ಪತ್ರ.

ಬೀದರ ಜಿಲ್ಲೆಯ ಶರಣ ಸ್ಮಾರಕಗಳು – ಒಂದು ಐತಿಹಾಸಿಕ ನೋಟ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಪ್ರಭು ಅವರು ನನ್ನ ಮಾರ್ಗದರ್ಶದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಂಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 05-10-2009

ಡಾ. ಬಿರಾದರ ಶ್ರೀಶೈಲ
ಸಂಶೋಧನ ಮಾರ್ಗದರ್ಶಕರು,
ಕ.ರಾಶಿ. ಸಂಸ್ಥೆಯ,
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,ಬೀದರ.

# ಪ್ರಮಾಣ ಪತ್ರ

ಬೀದರ ಜಿಲ್ಲೆಯ ಶರಣ ಸ್ಮಾರಕಗಳು – ಒಂದು ಐತಿಹಾಸಿಕ ನೋಟ ಎಂಬ ನಿಂಬಂಧವನ್ನು ಡಾ. ಬಿರಾದರ ಶ್ರೀಶೈಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : 05-10-2009

ಪ್ರಭು ಶಿವರಾಜ
ಎಂ.ಫಿಲ್,ವಿದ್ಯಾರ್ಥಿ
ಕ.ರಾ.ಶಿ.ಸಂಸ್ಥೆಯ
ಸ್ನಾತಕೋತ್ತರಕನ್ನಡ ಸಂಶೋಧನ ಕೇಂದ್ರ, ಬೀದರ.


ಪರಿವಿಡಿ

## ಪ್ರಸ್ತಾವನೆ

ಕಾಲಧ್ಗಲ್ಲಿ ಚಾಳುಕ್ಯ ಅರಸ ೩ನೇ ಸೋಮಶ್ವರನ ಅಶಕ್ತತೆಯನ್ನು ಮನಗಂಡು ಕಳಚೂರಿ ಪೇರ್ಮಾಡಿ ಚಾಳುಕ್ಯರನ್ನು ಸದೆಬಡಿದು ಕಳಚೂರಿ ಪ್ರಾಬಲ್ಯವನ್ನು ಹೆಚ್ಚಿಸುವಲ್ಲಿ ಪ್ರಯತ್ನಿಸಿದನು. ಆದರು ಆತನ ಕಾರ್ಯ ಕೈಗೂಡಲಿಲ್ಲ. ಅದನೇ ಮುಂದುವರೆಸಿದ ಬಿಜ್ಜಳನು ಚಾಳುಕ್ಯರ ಸೋಮೇಶ್ವರನನ್ನು ಸದೆಬಡಿದು ಸ್ವತಂತ್ರ ಅರಸನೆಂದು ಘೋಷಿಸಿಕೊಂಡನು. ಚಾಳುಕ್ಯ ತೈಲಪನ ಮಹಾಮಾಂಡಳೇಶ್ವರನಾಗಿ ಕಾರ್ಯನಿರ್ವಹಿಸುತ್ತಿದ್ದನು. ಬಿಜ್ಜಳ ಕಾಲಕ್ರಮೇಣದಲ್ಲಿ ತನ್ನ ರಾಜಕೀಯ ಚಾಣಾಕ್ಷತನದಿಂದ ರಾಜ್ಯದ ಸಂಪೂರ್ಣ ಅಧಿಕಾರವನ್ನು ತನ್ನ ಹತೋಟಿಗೆ ತೆಗೆದುಕೊಂಡು ತನಗೆ ಆಪ್ತರಾದವರನ್ನು ಸಾಮಂತ ಮತ್ತು ಮಂಡಳೇಶ್ವರರನ್ನಾಗಿ ನೇಮಿಸಿಕೊಂಡನು. ಹೀಗಾಗಿ ತನ್ನ ಆಪ್ತರ ಸಹಾಯದಿಂದ ಕಲ್ಯಾಣದ ಆಡಳಿತ ಸಂಪೂರ್ಣವಾಗಿ ಬಿಜ್ಜಳನ  ವಶವಾಯಿತು.

ತೈಲಪನು ಉತ್ತರದ ಕಾಕತೀಯರ ಮೇಲೆ ದಂಡೆತ್ತಿ ಹೋದಾಗ ಆತನಿಗೆ ಸಹಾಯ ಮಾಡುವ ಬದಲಾಗಿ ತನ್ನ ಆಪ್ತಸಾಮಂತರೊಂದಿಗೆ ಕಲ್ಯಾಣದ ಕೋಟೆಯನ್ನು ಬಿಜ್ಜಳ ಪ್ರವೇಶಿಸಿದನು. ತದನಂತರದಲ್ಲಿ ಹಾನಗಲ್ಲಿನ ಕದಂಬರನ್ನು ಮತ್ತು ಚಾಳುಕ್ಯರ ಸಾಮಂತ ಗಂಡಾರಾದ್ಯರನ್ನು ಸೋಲಿಸಿ ಆತನನ್ನು ತನ್ನ ಅಧೀನತೆಯಲ್ಲಿ ಒಪ್ಪಿಕೊಳ್ಳುವಂತೆ ಮಾಡಿದನು. ಸಮೃದ್ಧಿಯನ್ನು ಅರಿಯಬಹುದು. ಬಸವಣ್ಣ ನಡೆಸಿದ ಸಮಾಜ ಸುಧಾರಣೆಯೊಂದಿಗೆ ಧಾರ್ಮಿಕ ಸುಧಾರಣೆಯಲ್ಲೂ ಸಹ ಆಧ್ಯಾತ್ಮಿಕ ಇತಿಹಾಸದಲ್ಲಿ ಹೊಸ ಮೇಲುಗೈ ಸಾಧಿಸಿದರು. ಸ್ವಾಂತತ್ತ್ಯ ಕೇವಲ ಮೇಲ್ವರ್ಗದವರ ಸ್ವತ್ತಾಗಿತ್ತು. ಸ್ಥಗಿತವಾದ ಧರ್ಮವನ್ನು ನಿರಾಕರಿಸಿದ ಬಸವಣ್ಣ ಜನ ಸಾಮಾನ್ಯರಿಗೂ ಅದನ್ನು ದಕ್ಕುವಂತೆ ಮಾಡಿದನು. ದೇವರು – ಭಕ್ತರ ನಡುವೆ ಇದ್ದ ಪೂಜಾರಿಯನ್ನು ನಿರಾಕರಿಸಿದನು ಯಾವ ದೇವಾಲಯಗಳು ಜನ ಸಾಮಾನ್ಯರಿಗೆ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಲಾಗಿತ್ತೋ ಅಂಥ ದೇವಾಲಯಗಳ ಹಂಗು ಹರಿದು" ಸ್ಥಾವರಕ್ಕಳಿವುಂಟು ಜಗಂಮ ಕಳಿವಿಲ್ಲ" ಎಂದು ಸಾರಿ ಜನಸಾಮಾನ್ಯರ ಕೈಗೆ ದೇವರನ್ನು ತಂದುಕೊಟ್ಟು ಸಮಾನತೆ ಮೆರೆದು ಮಹಾ ಪುರುಷರೇನಿಸಿಕೊಂಡವ್ರುರು. ಶರಣರು ಇಂತಹ ಬದಲಾವಣೆ ಪ್ರಭಾವದಿಂದಾಗಿ ರಾಷ್ಟ್ರದ – ರಾಷ್ಟ್ರದಾಚೆಗಿನ ಜನ ಕಲ್ಯಾಣಕ್ಕೆ ಬರಲಾರಂಭಿಸಿದರು. ಇದರಿಂದ ಕಲ್ಯಾಣ ಸಾಂಸ್ಕೃತಿಕವಾಗಿಯು ಕೂಡ ಮಹತ್ವದ ಕೇಂದ್ರವಾಗಿ ಬಿಜ್ಜಳನ ಆಸ್ಥಾನಕ್ಕೆ ಕಳಸವೇರಿಸಿದಂತಾಯಿತು.

ಭಾಷಿಕವಾಗಿ, ಮೇಲ್ವರ್ಗದವರ ಭಾಷೆಯಾದ ಸಂಸ್ಕೃತವು ದೇವರ ಭಾಷೆ ಎಂದು ಗುರುತಿಸಲ್ಪಟ್ಟಿತ್ತು. ಆದರೆ ಜನಭಾಷೆಯಾದ ದೇಶಿ ಕನ್ನಡವು ಆಡಳಿತ ಭಾಷೆಯಾಗಿ, ಕಾವ್ಯಕ್ಕೆ ವಾಹಕವಾಗಿ ಕೂಡಿ ಬೆಳೆಸಿದ್ದು ಈ ಕಾಲದಲ್ಲೇ. ಇಂಥ ಸಮಾಜೋಧಾರ್ಮಿಕ ಹಾಗೂ ಸಾಂಸ್ಕೃತಿಕ ಸುಧಾರಣೆಯ ಬದಲಾವಣೆಗಳು ಮೇಲ್ವರ್ಗದವರ ನಂಬಿಕೆಗಳನ್ನೇ ಅಲ್ಲಾಡಿಸಿದವು.

ಬಸವಣ್ಣನ ಈ ಸುಧಾರಣೆಗಳು ಮೇಲ್ವರ್ಗದವರಿಗೆ ಸಹಿಸದಾಯಿತು. ಹಾಗಾಗಿ ಬಸವಣ್ಣನ ವಿರುದ್ಧ ಅನೇಕ ಅಪವಾದಗಳು ಬರಲಾರಂಭಿಸಿದವು ಇದಂಪುದಕ್ಕೂ ಬಸವಣ್ಣ ಜಗ್ಗಲಿಲ್ಲ. ಮಿಥ್ಯಾರೋಪಗಳನ್ನು ಬಸವಣ್ಣ ಸಾಬೀತು ಪಡಿಸಿದ್ದು. ಕೂಡ ಆರೋಪಿಗಳಿಗೆ ಅವಮಾನವಾಯಿತು. ಇಂಥ ಸಂದರ್ಭದಲ್ಲಿ "ನ್ಯಾಯ  ನಿಷ್ಠುರಿ ದಕ್ಷಿಣ್ಯಪರ ನಾನಲ್ಲ. ಲೋಕ ವಿರೋಧಿ ಶರಣನಾರಿಗೂ ಅಂಜುವುದಿಲ್ಲವೆಂದು ಬಸವಣ್ಣ ಮುಂದುವರೆಯುತ್ತಿದ್ದರೆ. ಮೇಲ್ವರ್ಗದ ಪಿತೂರಿಕಾರರು ಮತ್ತು ಮಂತ್ರಿ ಮಂಡಳದ ಅತೃಪ್ತ ಜನರು ಸೇರಿಕೊಂಡು ತಮ್ಮ ಪ್ರಾಬಲ್ಯ ಹೆಚ್ಚಿಸಿಕೊಂಡರು. ಬಿಜ್ಜಳನ ಮೇಲೆ ಎಲ್ಲಿಲ್ಲದ ಒತ್ತಡ ತಂದರು, ಬಿಜ್ಜಳನ ಇಕ್ಕಟ್ಟಿನಲ್ಲಿ ಸಿಲುಕುವುದರೊಂದಿಗೆ ಒಲ್ಲದ ಮನಸಿನಿಂದಲೇ ಬಸವಣ್ಣನವರನ್ನು

ಸಮಾಧಾನ ಪಡಿಸಿ ಕೇಳಲು ಬಂದಾಗ "ಅರಸು ಮುನಿದರೆ ಊರೊಳಗಿರಬಾರದು" ಎಂದು ಬಸವಣ್ಣ ಕೂಡಲ ಸಂಗಮಕ್ಕೆ ತೆರಳಿದರು. ತಾನು ನಂಬಿದ ತತ್ವದೊಂದಿಗೆ ಬದುಕಬೇಕೆನ್ನುವ ಬಸವಣ್ಣ ರಾಜಕೀಯವಾಗಿ ಅರಸುತ್ತಿಗೆಯನ್ನು ತ್ಯಜಿಸಿದನು.

ಕಳಚೂರಿಯಾಗಿದ್ದ ಕೇವಲ ಸುಮಾರು ೨೬ ವರ್ಷಗಳು ಮಾತ್ರ ಅಧಿಕಾರದಲ್ಲಿದ್ದರು ಅವರ ಆಳ್ವಿಕೆ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಶೇಷ ಸ್ಥಾನ ಪಡೆದಿದೆ. ಕಲ್ಯಾಣದ ಚಾಳುಕ್ಯರ ಅವನತಿ ಕಳಚೂರಿಗಳ ಉನ್ನತಿಗೆ ನೆರವಾಯಿತು. ದೇವಗಿರಿಯ ಸೇವುಣರು ಮತ್ತು ದೂರಸಮುದ್ರದ ಹೊಯ್ಸಳರ ರಾಜ್ಯ ಸ್ಥಾಪನೆಗೆ ಕಳಚೂರಿಗಳು ಕಾರಣರಾದರು. ಇವರ ಕಾಲದಲ್ಲಿ ವೀರಶೈವಧರ್ಮದ ಸ್ಥಾಪನೆ ಮತ್ತು ಪ್ರಚಾರಕ್ಕೆ ಅವಕಾಶ ದೊರೆಯಿತು. ಈ ಕಾಲದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಅವನತಿಗೀಡಾದವು. ಒಟ್ಟಾರೆಯಾಗಿ ಹೇಳುವುದಾದರೆ ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ಕಳಚೂರಿಗಳ ಸ್ಥಾನ ವೈಶಿಷ್ಟ್ಯ ಪೂರ್ಣವಾಗಿತ್ತು.

ಅರಿವೆ ಗುರು ಗುರವೆ ಪರದೈವ, ಗುರುವಿಲ್ಲದೇ ಗುರಿಯಿಲ್ಲ ಎಂಬಂತೆ ಶರಣದ ದಿವ್ಯ ಸಂದೇಶಗಳು, ಆದರ್ಶಗಳು, ಸಾಮಾಜಿಕ ಜೀವನದಲ್ಲಿ ಅಳವಡಿಸಿಕೊಳ್ಳಲು ಸ್ಮಾರಕಗಳ ಪಾತ್ರ ಅಮೂಲ್ಯವಾಗಿವೆ. ಶರಣ ಸ್ಮಾರಕಗಳು ಪ್ರಕೃತಿ ಸೌಂದರ್ಯದ ರಮಣಿಯ ತಾಣಗಳಾಗಿವೆ. ಭಾವೈಕ್ಯತೆಯ ಸಂಕೇತಗಳಾಗಿವೆ. ಮಾನವನ ಬದುಕಿನಲ್ಲಿ ವಿಶಿಷ್ಠತೆ, ಸರಳತೆ, ಶಾಂತತೆಯನ್ನೆ ಕಾಪಾಡಿಕೊಂಡು ಬರುವಂತಹ ಶಕ್ತಿಯು ಸ್ಮಾರಕಗಳಲ್ಲಿದೆ.ಎಂದು ಹೇಳಬಹುದು.

ಶರಣ ಎಂಬ ಪದವನ್ನು ಕಾಮದ ಹಂಗಿಲ್ಲದವ, ಸಂಸಾರಿಕ ಜೀವನದಿಂದ ಮುಕ್ತಿ ಪಡೆದು ಪಾರಮಾರ್ಥಿಕ ಜೀವನದೆಡೆಗೆ ತನ್ನನ್ನು ತೊಡಗಿಸಿಕೊಂಡಿರುವವನು ಎಂಬುದಾಗಿ ಅರ್ಥೈಸಬಹುದು. ವಿಶೇಷ್ಠರ ಚಾರಿತ್ರ್ಯ ಗುರುತಿಸುವ ಶರಣರ ಕುರುಹಗಳೇಂದು ಹೇಳಲಾಗಿದೆ. ಇಂತಹ ಶರಣರ ಸ್ಮಾರಕಗಳು ಜ್ಞಾಪಿಸುವಂತಹ ಶರಣರ, ನೆಲೆ ವಾಸಸ್ತಾನ, ನಡತೆ, ಆದರ್ಶಗಳು, ಮೌಲ್ಯಗಳು ಮುಂತಾದವುಗಳನು ಸಮಾಜದಲ್ಲಿ ಶಾಶ್ವತವಾಗಿರಿಸಲು ಸ್ಮಾರಕಗಳ ಕಾರ್ಯ ಅಮೋಘವಾಗಿದೆ. ಒಬ್ಬ ವ್ಯಕ್ತಿ ಸಾಧಿಸಲಾಗದಂತಹ ಅಪೂರ್ವ ಕಾರ್ಯಗಳು ಈ ಸ್ಮಾರಕಗಳು ಸಾಧಿಸುತ್ತವೆ. ಇವುಗಳು ಜನರ ಜೀವನದ ಪರಿವರ್ತನೆಗೆ ದಾರಿ ದ್ವೀಪಗಳಾಗಿವೆ. ಅಂದರೆ ಜನರಲ್ಲಿ ಭಕ್ತಿ, ದೃಡತೆ, ಅಚಲ ನಂಬಿಕೆ, ಆತ್ಮವಿಶ್ವಾಸ ಮುಂತಾದ ಗುಣಗಳು ಬೆಳೆಸುತ್ತವೆ. ಅಂಧಕಾರದ ಸಮಾಜದಲ್ಲಿ ಪ್ರಜ್ವಲಿಸುವ ಜ್ಯೋತಿಯಂತೆ, ಸಾಮಾನ್ಯರಲ್ಲಯಾ ಏಕ್ಯತೆಯ ಶ್ರೀಮಂತಿಕೆಯನ್ನು ಎತ್ತಿ ಹಿಡಿಯುವಂತೆ, ಪ್ರಕೃತಿ ಸೌಂದರ್ಯದ ಸುಂದರ ತಾಣಗಳಾಗಿವೆ. ಅಂತಹ ಕೆಲವೊಂದು ಶರಣ ಸ್ಮಾರಕಗಳು ಬೀದರ ಜಿಲ್ಲೆಯಲ್ಲಿರುವುದು ಹೇಮ್ಮೆಯ ಸಂಗತಿಯಾಗಿದೆ.

ಈ ೧೨ನೇ ಶತಮಾನದ ಶರಣ ಪರಂಪರೆಯು ಕನ್ನಡ ನಾಡಿನಲ್ಲಿ ಮುಂದುವರೆಯಿತು.ಈ ಪರಂಪರೆಯಲ್ಲಿ ಅನೇಕ ಶಿವ ಶರಣರು ಹುಟ್ಟಿ ಬಂದರು. ಅವರನ್ನು ಕಾಯಕದ ಹೆಸರಿನಿಂದಲ್ಲೇ ಗುರುತಿಸಲಾಗುವುದು. ಡೋಹರ ಕಕ್ಕಯ್ಯ, ಮಡಿವಾಳ ಮಾಚಿದೇವ, ಹರಭಕ್ತ ಹರಳಯ್ಯಾ, ಅಂಬಿಗಾರ ಚೌಡಯ್ಯಾ, ಕುಂಬಾರ ಗುಂಡಯ್ಯಾ , ಅಕ್ಕನಾಗಮ್ಮಾ, ನೀಲಾಬೀಕೆ ಮೋದಲಾದವರ ಕಿರು ಪರಿಚಯ್ಯಾ ನೀಡುವ ಪ್ರಯತ್ನವಿಲ್ಲಿ ನಡೆದಿದೆ. ಈ ವಿಷಯದ ಕುರಿತು ಇನ್ನು ಹೆಚ್ಚಿನ ಸಂಶೋಧನೆಗಳು ನಡೆಯುವುದು ಅಗತ್ಯವಾಗಿದೆ ಎಂದು ಹೇಳಲಾಗುತ್ತದೆ. ಇಂತಹ ಶಿವ ಶರಣರ ಚೇರಿತ್ರೆಯು ಸಮಾನ್ಯರಲ್ಲಿ ವಿಶೇಷ ರೀತಿಯ ವ್ಯಕ್ತಿತ್ವವನ್ನು ರೂಪಿಸಬಹುದು. ಏಕೆಂದರೆ ಸಮ ಕಾಲೀನ ಶರಣರ ವಚನಗಳು ಪ್ರಸ್ತುತ ಜೀವನಕ್ಕೆ ಮಾರ್ಗಗಳಾಗಿವೆ. ಉತ್ತಮ ವ್ಯಕ್ತಿತ್ವದ ನಿರ್ಮಾಣಕ್ಕೆ ಸಹಾಯಕಾರಿಯಾಗಿವೆ.

## ೧೨ –೧೩ ನೇ ಶತಮಾನದ ಶರಣ ಸ್ಮಾರಕಗಳು

೧೨ನೇ –೧೩ನೇ ಶತಮಾನಕ್ಕೆ ಸಂಬಂಧಿಸಿದಂತೆ ಶರಣ ಸ್ಮಾರಕಗಳು ಬಸವ ಕಲ್ಯಾಣ ತಾಲ್ಲೂಕಿನಲ್ಲಿರುವುದು ವಿಶೇಷ. ಬಸವಣ್ಣನಿಂದ ಕಲ್ಯಾಣವಾದ ನಾಡು ಬಸವಕಲ್ಯಾಣ. ೧೨ನೇ ಶತಮಾನದಲ್ಲಿ ಸಮಾಜದ ಮಲೀನತೆ ಮೌಢ್ಯತಗಳನ್ನು ತೊಡೆದು ಹಾಕುವಲ್ಲಿ ಶಿವಶರಣರು ವಿಶೇಷವಾದ ಕಾರ್ಯಚಟುವಟಿಕೆಯಲ್ಲಿ ತೊಡಗುತ್ತಿದ್ದರು. ಪ್ರತಿಯೊಬ್ಬ ಶರಣನು ದಿನವಿಡಿ ಕಾಯಕದಲ್ಲಿ ನಿರತನಾಗಿ ಸಾಂಯಕಾಲ ಅನುಭವ ಮಂಟಪದಲ್ಲಿ ಸೇರಿಕೊಂಡು ವಚನ ರಚಿಸುತ್ತಿದ್ದರು. ವಚನಗಳ ಕುರಿತಾಗಿ ಚರ್ಚೆಗಳು ಜರುಗುತ್ತಿದ್ದವು. ವಿಚಾರಗೊಷ್ಠಿಗಳು ಏರ್ಪಡಡುತ್ತಿದ್ದವು ಈ ರೀತಿಯಾಗಿ ಕಲ್ಯಾಣ ನಾಡು ವಿವಿಧ ಜಾತಿ ಜನಾಂಗದವರಿಂದ ಕೊಡಿದ ಐಕ್ಯತೆಯ ಬಿಡಾಗಿತ್ತು. ಮಾನವಿಯತೆಯ, ಪಾವಿತ್ರ್ಯತೆ ಎಂಬುದು ಶರಣರ ಭಾವದಲ್ಲಿತ್ತು. ಅವರ ನಡೆ, ನುಡಿ, ಆಚಾರ ವಿಚಾರಗಳು ಲೋಕಕಲ್ಯಾಣಕ್ಕೆ ಮಾದರಿಯಾಗಿದ್ದವು.

ಶರಣರ ಸ್ಮಾರಕಗಳು ಕಲ್ಯಾಣ ನಾಡಿನಲ್ಲಿ ಇಂದಿಗೂ ಪ್ರಸ್ತುತವಾಗಿವೆ. ಆದರೆ ಅವುಗಳಲ್ಲಿ ಕೆಲವೊಂದು ಮಾತ್ರ ಉಫಲಬ್ಧಿವಾಗಿವೆ. ಪ್ರಮುಖವಾದವುಗಳು ಈ ಕೆಳಕಂಡಂತಿವೆ.

* ಬಸವಣ್ಣನವರ ಅರಹಿನ ಮನೆ
* ಹಡಪದ ಅಪ್ಪಣ್ಣನವರ ಗುಹೆ
* ತ್ರಿಪುರಾಂತ ಕರೆ – ಧರ್ಮಶಾಲೆ
* ಘನಲಿಂಗ ರುದ್ರಮುನಿ
* ನಿಲಮ್ಮ– ಅಕ್ಕ ನಾಗಮ್ಮನವರ ಗವಿಗಳು
* ನಲಿಯ ಚಂದಯ್ಯ – ಅಂಬಿಗಾರ ಚೌಡಯ್ಯನ ಗವಿಗಳು
* ಮಡಿವಾಳ ಮಾಚಿದೇವರ ಹೊಂಡ
* ಇತರ ಸ್ಮಾರಕಗಳು.

## ಶರಣರ ಸ್ಮಾರಕಗಳು

ಕರ್ನಾಟಕದ ಮುಕುಟವಾಗಿರುವ ಬೀದರ ಜಿಲ್ಲೆ ಹಲವಾರು ಕ್ಷೇತ್ರಗಳಲ್ಲಿ ವಿಶಿಷ್ಟವಾದ ಸ್ಥಾನ ಹೊಂದಿದೆ. ಇತ್ತಿಚ್ಚೀನ ಕೆಲವು ದಶಕಗಳಲ್ಲಿ ತೀರಾ ಅವಜ್ಞೆಗೊಳಗಾದರೂ ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹಿರಿದಾದ ಮಹತ್ವ ಪಡೆದಿದೆ. ಭೌಗೋಳೀಕ ವ್ಯಾಪ್ತಿಯಲ್ಲಿ ಕಿರಿದಾಗಿರುವ ಐದು ತಾಲ್ಲೂಕಗಳನ್ನೊಳಗೊಂಡಿರುವ ಬೀದರ ಜಿಲ್ಲೆ ಸರ್ವಧರ್ಮ ಸಮನ್ವಯ ಕ್ಷೇತ್ರವಾಗಿವೆ. ವಿವಿಧ ಸಂಸ್ಕೃತಿಗಳ ನಲೆ ಬಿಡಾಗಿದೆ. ಶತಮಾನಗಳು ಕಳೇದಂತೆಲ್ಲಾ ನವನಾಗರಿಕತೆಯಡೆಗೆ ಹೆಜ್ಜೆ ಹಾಕುತ್ತಿರುವ ಈ ಪ್ರದೇಶವು ಹಲವು ಏರು ಪೆರುಗಳನ್ನು ಕಂಡಿದ್ದರೂ ಕಾಲಮಾನಕ್ಕನುಗುಣವಾಗಿ ಸಾಹಿತಿಕ, ಸಾಂಸ್ಕೃತಿಕ ಪರಂಪರೆ ಕಾಯ್ದು ಕೊಂಡು ಬಂದಿದೆ.

೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಜರುಗಿದ ಸಮಗ್ರ ಕ್ರಾಂತಿಯ ಕೇಂದ್ರ ಬಿಂದು ಶರಣ ಚಳವಳಿ. ಈ ಚಳುವಳಿಯ ನೇತಾರ ಬಸವಣ್ಣನವರು. ಸಮಾಜೋಧಾರ್ಮಿಕ ಕ್ರಾಂತಿಯ ಮೂಲ ಪುರುಷ, ಸಮಾಜ ಸುಧಾರಕ ಬಸವಣ್ಣನವರ ನೇತೃತ್ವದಲ್ಲಿ ವಿನೂತನವಾದ ಆಂದೋಲನ ಜರುಗಿತು. ಇದು ಕರ್ನಾಟಕಕ್ಕೆ ಮಾತ್ರ ಸಿಮಿತವಾಗದೇ ಇಡಿ ಜಗತ್ತಿನ ಮನುಕುಲಕ್ಕೆ ಆದರ್ಶ ಪ್ರಾಯವಾಯಿತು. ಈ ಸುಧಾರಣೆಯ ಆಂದೋಲನದಲ್ಲಿ ಪಾಲ್ಗೊಂಡ ಶರಣ ಶರಣೆಯರು ಅಸಂಖ್ಯೆ ಅವರೆಲ್ಲರ ಜೀವನ ಸಾಧನೆಗಳನ್ನು, ವಿವರಣೆಗಳನ್ನು ಸಿಕ್ಕಿದ್ದು ಅತ್ಯಲ್ಪವೆಂದೆ ಹೇಳಬೇಕು. ಅದರಲ್ಲೂ ಶಿವಶರಣರ ಶರಣೆಯರ ನೆನಪನ್ನು ಮಾಡಿಕೊಡುವ ನೆಲೆಗಳು, ವಿಗ್ರಹಗಳು, ಸ್ವತಃ ಅವರೇ .ಉಪಯೋಗಿಸಿದಂತಹ ವಸ್ತುಗಳು, ವಾಸ ಸ್ಥಳಗಳು ಕೆಲವೊಂದು ಮಾತ್ರ ಸಿಗುತ್ತವೆ. ಸದ್ಯಕ್ಕೆ ಸಿಕ್ಕಿರುವ ಸ್ಮಾರಕಗಳು ಶರಣರನ್ನು ನೆನಪಿಸುವ ಜ್ಞಾಪಕರ್ಥವಾಗಿರುವ ಕುರುಹಗಳಾಗಿವೆ. ಮೂಲದಲ್ಲಿ ನಿರ್ಮಾಣಗೊಂಡ ಎಷ್ಟೋ ಸ್ಮಾರಕಗಳು ಕಾಲಗರ್ಭದಲ್ಲಿ ಮಾಯವಾಗಿವೆ. ಅಳಿದುಳಿದ ಕೆಲವನ್ನು ಮಾತ್ರ ಶರಣರ ವಾರಸುದಾರರು ಕಾಯ್ದು ಕೊಂಡು ಬಂದಿರುವರು ಸ್ಮಾರಕಗಳ ಕುರಿತು ಸಂಕ್ಷಿಪ್ತವಾಗಿ ಮಾಹಿತಿ ನೀಡಲು ಪ್ರಯತ್ನಿಸಿದ್ದೇನೆ. ಕೆಲವೊಮ್ಮೆ ವ್ಯಕ್ತ ಅಭಿಪ್ರಾಯಗಳಲ್ಲಿಯೂ ವಿಭಿನ್ನತೆ ಕಂಡು ಬರುತ್ತದೆ. ಸಮಂಜಸವಾದ ಮನ್ನಣೆಗೊಳಪಟ್ಟ ನೆಲೆ ಕುರುಹಗಳನ್ನಿಲ್ಲಿ ಪ್ರಸ್ತಾಪಿಸಿದ್ದೇನೆ.

### ೧. *ಬಸವಣ್ಣನವರು ಅರವಿನ ಮನೆ*

ಬಸವಕಲ್ಯಾಣದ ಹೂರವಲಯದಲ್ಲಿರುವ ಅರುಹಿನ ಮನೆ ಗುಹೆಯ ಮಾದರಿಯಲ್ಲಿದೆ. ಅದನ್ನು ಬಸವಣ್ಣನವರ ಪೂಜಾಗೃಹವೆಂದು ಅಥವಾ ಮಹಾಮನೆ ಎಂದು ಕರೆಯುತ್ತಾರೆ. ಜಂಬಿಟ್ಟಗೆಯ ದಿಬ್ಬದೊಳಗೆ ಇದನ್ನು ಕೊರೆಯಲಾಗಿದೆ. ಬಸವಣ್ಣನವರು ಇಲ್ಲಿಯೇ ಕುಳಿತು ಇಷ್ಟ ಲಿಂಗ ಪೂಜೆ ಮಾಡಿಕೊಳ್ಳುತ್ತಿದ್ದರೆಂದು ಭಕ್ತಾದಿಗಳಿಗೆ ಹಿತೋಪದೇಶ ಹೇಳುತ್ತಿದ್ದರೆಂದು ಪ್ರತೀತ. ಗತ ಕಾಲದ ಘಟನೆಯನ್ನು ನೆನಪಿಸುವಂತೆ ಪ್ರಸ್ತುತ ಮನೆಯಲ್ಲಿ ಬಸವಣ್ಣನವರ ಮೂರ್ತಿ ಸ್ಥಾಪಿಸಲಾಗಿದೆ. ದಿನ ನಿತ್ಯವೂ ಪೂಜೆ ನಡೆಯುತ್ತದೆ. ಅರುಹಿನ ಮನೆಯನ್ನು ಆಧುನಿಕರಣಗೊಳಿಸುವ ಕೆಲಸ ಮುಕ್ತಾಯದ ಹಂತದಲ್ಲಿದೆ.

### ೨. <u>ಹಡಪದ ಅಪ್ಪಣನವರ ಗುಹೆ :</u>

ಇದು ಅರುಹಿನ ಮನೆಯ ಪಕ್ಕದಲ್ಲಿದೆ. ಅರುಹಿನ ಮನೆ ಮತ್ತು ಅಪ್ಪನಣ್ಣನವರ ಗುಹೆಗಳು

ರಚನೆ ಹಾಗೂ ಭೂ ವೈಜ್ಞಾನಿಕ ಮಾದರಿಯು ಒಂದೇ ರೀತಿಯದ್ದು. ಪ್ರಸ್ತುತ ಗುಹೆ ಸುರಾಗ ಮಾರ್ಗದಂತೆ ಕಂಡು ಬರುತ್ತದೆ. ತಂಪಾದ ನೆಲೆ ಗವಿಯ ಕೊನೆಯಲ್ಲಿ ಶಿವ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಬೆಸಿಗೆ ಕಾಲದಲ್ಲಿ ಈ ಗುಹೆ ಮನಸ್ಸಿಗೆ ನೆಮ್ಮದಿಯನ್ನು ಕೊಡುತ್ತದೆ. ಹಡಪದ ಅಪ್ಪಣ್ಣ ಹಾಗೂ ಬಸವಣ್ಣನವರು ಹೆಚ್ಚು ನಿಕಟವರ್ತಿಗಳಾಗಿರುವುದರಿಂದ ಇವರಿಬ್ಬರ ವಾಸ ಸ್ಥಳಗಳು ಪರಸ್ಪರ ಹತ್ತಿರದಲ್ಲಿವೆ. ಈತ ಬಸವಣ್ಣನವರಿಗೆ ಊಟವಾದ ಮೇಲೆ ತಾಂಬೂಲವನ್ನು ಸಲ್ಲಿಸುವ ಕಾಯಕ ಮಾಡುತ್ತಿದ್ದನು. ಈತನ ಪತ್ನಿ ಹಡಪದ ಲಿಂಗಮ್ಮ.

### ೩. ಅಕ್ಕ ನಾಗಮ್ಮ – ನಿಲಮ್ಮನವರ ಗವಿಗಳು

ಅರುಹಿನ ಮನೆಯ ಹಿಂಭಾಗದ ದಿಬ್ಬದ ಮೇಲೆ ತ್ರಿಪುರಾಂತಕ ಕೆರೆಯ ಇನ್ನೊಂದು ಬದಿಯಲ್ಲಿ ಇವರಿಬ್ಬರ ಗವಿಗಳಿವೆ. ಅಕ್ಕ–ಪಕ್ಕದಲ್ಲಿರುವ ಇವೇರಡು ಗವಿಗಳನ್ನು ಜಂಬಿಟ್ಟಿಗೆಯ ದಿಬ್ಬದೊಳಗೆ ಕೊರೆಯಲಾಗಿದ್ದು. ಇವುಗಳ ಪ್ರವೇಶದ್ವಾರವು ಚಿಕ್ಕದಾಗಿರುವ ಮಾದರಿಯ ಕಟ್ಟಡವಿದೆ. ಪಡಸಾಲೆಯ ಮಧ್ಯಮದಲ್ಲಿ ಚಿಕ್ಕ ಮಂಟಪವಿದ್ದು ಅಲ್ಲಿ ಇಷ್ಟ ಲಿಂಗವನ್ನು ಪೂಜಿಸಿದ್ದಾರೆ. ಅಕ್ಕ ನಾಗಮ್ಮನವರ ಇತ್ತೀಚೀನ ಮೂರ್ತಿಯಿದೆ. ಅದು ಸುಮಾರು ೧೯೫೬ ಕ್ಕೆ ಸೇರಿದು ತಿಳಿದು ಬರುತ್ತದೆ. ಕಿಡಿಗೇಡಿಗಳು ಈ ಶಿಲ್ಪವನ್ನು ಭಗ್ನಗೊಳಿಸಿದ್ದಾರೆ.

ಗವಿಯ ಒಳಗಡೆಯ ಎಡ ಭಾಗದಲ್ಲಿ ಚಿಕ್ಕ ಕಟ್ಟೆಯಿದೆ. ಅದರ ಮೇಲೆ ಕೆಲವೊಂದು ಮೂರ್ತಿಗಳಿವೆ ಅವುಗಳಿಗೆ ಪ್ರತಿನಿತ್ಯವೂ ಪೂಜೆ ಸಲ್ಲಿಸಲಾಗುತ್ತಿದೆ. ಗವಿಯ ಇನ್ನೊಂದು ಭಾಗದ ಕಟ್ಟೆಯನ್ನು ಚೆನ್ನಬಸವಣ್ಣ ತೊಟ್ಟಿಲು ಎನ್ನುವುದುಂಟು. ಚೆನ್ನಬಸವಣ್ಣನವರು ತಮ್ಮ ಬಾಲ್ಯದ ದಿನಗಳೆಲ್ಲ ಕಳೆವರು ಇದೆ ಕಟ್ಟೆಯ ಮೇಲೆ ಕುಳಿತು ಶಿವ ಪೂಜೆ, ಶಿವ ಧ್ಯಾನ ಮಾಡುತ್ತಿದ್ದರೆಂದು ಜನತೆಯ ಅಭಿಪ್ರಾಯ. ಇದು ಕಲ್ಪನೆಯು ಆಗಿರಬಹುದು. ಇವರ ಗವಿಗಳು ಪರಸ್ಪರ ಕೂಡಿಕೊಂಡಿದ್ದಕ್ಕೆ ಬಲವಾದ ಕಾರಣ ರಕ್ತ ಸಂಬಂಧವೆ ಆಗಿದೆ.

### ೪. ಘನಲಿಂಗ ರುದ್ರಮುನಿ ಹಾಗೂ ವಿಜ್ಞಾನೇಶ್ವರ ಗವಿ

ಈ ಜಂಬಿಟ್ಟಿಗೆಯ ದಿಬ್ಬದೊಳಗೆ ಕೊರೆಯಲಾಗಿರುವ ಈ ಗವಿಗಳು ತ್ರಿಪುರಾಂತರ ಕರೆಯ ದಂಡೆಯಲ್ಲಿದೆ. ಇದು ಕಾಲಜ್ಞಾನ ಕತ್ಕು ರೇವಣಸಿದ್ಧಶ್ವರರ ಮಗ ಘನಲಿಂಗ ರುದ್ರಮುನಿಯ ಸ್ಥಳವಾಗಿದೆ. ಗವಿಯ ಎದುರಗಡೆ ಚಿಕ್ಕ ಸುಂದರ ಮಂಟಪವಿದೆ. ಅದರಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮತ್ತೋಂದು ಕಡೆ ಕಟ್ಟಿಸಿದ ಬಾವಿಯಿದೆ. ಘನಲಿಂಗ ರುದ್ರಮುನಿಗಳ ಗವಿ ಉದ್ದ ಮತ್ತು ಅಗಲವಾಗಿದ್ದು ವ್ಯವಸ್ಥಿತ ರೀತಿಯಲ್ಲಿದೆ. ಇದರ ಎದುರಗಡೆ 'ಮೀತಾಕ್ಷರ' ಸಂಹಿತೆಯನ್ನು ರಚಿಸಿರುವ ವಿಜ್ಞಾರೇಶ್ವರನ ಗವಿಯಿದೆ. ಗವಿಯನ್ನು ಹೊಂದಿಕೊಂಡಂತೆ ಪಡಸಾಲೆಯಂತಹ ಕಟ್ಟಡವಿದೆ. ಗವಿಗೆ ಹತ್ತಿಕೊಂಡಂತೆ ಕೆಲವೊಂದು ಕೋಣೆಗಗಳಿವೆ.

ಒಟ್ಟಾರೆಯಾಗಿ ಇಲ್ಲಿಯ ಗವಿ ಕೋಣೆ ಸಮಾಧಿಯ ಪ್ರದೇಶವನ್ನು ಮರಿದೇವರ ಗುಡ್ಡವೆಂದು ಕರೆಯುತ್ತಾರೆ. ಈ ಗುಡ್ಡದ ಮೇಲಿನ ಎಡ ಭಾಗದ ಡಾ॥ ಚನ್ನ ಬಸವ ಪಟ್ಟದೇವರ ಸಾನ್ನಿಧ್ಯದಲ್ಲಿ ನಿರ್ಮಿಸಲಾದ ನೂತನ ಅನುಭವ ಮಂಟಪವಿದೆ. ಇದೊಂದು ಸಾಕಷ್ಟು ಮಹತ್ವ ಪಡೆದಿರುವ ಸ್ಮಾರಕವಾಗಿದೆ.

೫. ಮಡಿವಾಳ ಮಾಚಿದೇವರ ಹೊಂಡ – ತ್ರಿಪುರಾಂತ ಕೆರೆ

ಕೆರೆಯ ಬಡ್ಡಿನ ಕೆಳಭಾಗದಲ್ಲಿರುವ ಹೊಂಡವನ್ನು ಮಡಿವಾಳ ಮಾಚಿದೇವರ ಹೊಂಡವೆಂದು ಕರೆಯುತ್ತಾರೆ. ಇಲ್ಲಿಯೇ ಅವರು ಶಿವ ಶರಣರ ಮೇಲಿನ ವಸ್ತ್ರಗಳನ್ನು ಸ್ವಚ್ಛಗೊಳಿಸುತ್ತಿದ್ದರೆಂದು ಹೇಳಲಾಗುತ್ತದೆ. ಹೊಂಡದ ಮಧ್ಯದಲ್ಲಿರುವ ದೇವಾಲಯದಲ್ಲಿ ಮಾಚಯ್ಯ ವಾಸವಾಗಿದ್ದನಂತೆ, ಇಲ್ಲಿ ಶಿವಲಿಂಗ ವಿರುವದನ್ನು ಕಾಣುತ್ತೇವೆ. ಈ ದೇವಾಲಯದ ಪಕ್ಕದಲ್ಲಿ ಪ್ರವೇಶ ದ್ವಾರದ ತೋಳು. ಬಿದ್ದಿದೆ ಇದು ಬೃಹತಾಕರವಾಗಿ ತುಂಬಾ ಅಲಂಕಾರಿಕವಾಗಿ ಕಂಡು ಬರುತ್ತಿತ್ತು. ಆದರೆ, ಈಗ ಅದು ಸಂಪೂರ್ಣವಾಗಿ ಕೆಡವಿ ಅದೇ ಸ್ಥಳದಲ್ಲಿ ನೂತನ ಭವ್ಯ ಮಂದಿರ ಕಟ್ಟಲಾಗುತ್ತಿದೆ. ಸುತ್ತಲು ಹೊಂಡವನ್ನು ಸ್ವಚ್ಛಗೊಳ್ಳಿಸಲಾಗುತ್ತೀದೆ. ಅಭಿವೃದ್ಧಿ ಕಾರ್ಯಗಳು ಜರುಗುತ್ತಲಿವೆ.

ಇತ್ತಿಚಿಗೆ ಬೀದರ ಜಿಲ್ಲಾ ಸರಕಾರಿ ಆಸ್ಪತ್ರೆಯ ಸಮೀಪ ಮಡಿವಾಳ ಮಾಚಯ್ಯಾನವರ ಸ್ಮಾರಕವನ್ನು ಸ್ಥಾಪಿಸಲಾಗಿದೆ. ಬೀದರ ಸಮೀಪದ ನಾವದಗೇರಿಯ ಶುಕ್ಲತೀರ್ಥದಲ್ಲಿರುವ ಮಡಿವಾಳೇಶ್ವರ ಗದ್ದುಗೆ ಪವಿತ್ರ ಕ್ಷೇತ್ರವೆಂದು ಪ್ರಚಲಿತದಲ್ಲಿದೆ.

೬) ಅಲ್ಲಮ ಪ್ರಭು ದೇವರ ಗದ್ದುಗೆ

ಇದು ಅರುಹಿನ ಮನೆಯ ದಕ್ಷಿಣ ದಿಕ್ಕಿನಲ್ಲಿದೆ. ಇದನ್ನು ಅಲ್ಲಮ ಪ್ರಭುಗಳ ಮಠವೆಂದು, ಶೂನ್ಯ ಸಿಂಹಾಸನದ ಮೂಲ ಪೀಠವೆಂದು ಹೇಳಲಾಗುತ್ತದೆ. ಇದರ ರಚನಾವಿನ್ಯಾಸವು ಮಠದ ಮಾದರಿಯಲ್ಲಿದ್ದು ಸುಸ್ಥಿತಿಯಲ್ಲಿದೆ. ಗದ್ದುಗೆಯ ಸ್ಥಳದಲ್ಲಿ ಪ್ರಭುದೇವರು ಕುಳಿತು ಇಷ್ಟಲಿಂಗ ಪೂಜೆ, ವಚನರಚನೆ ಮಾಡುತ್ತಿದ್ದರೆಂದು ಜನತೆಯ ನಂಬಿಕೆ. ಪ್ರಸ್ತುತ ಗದ್ದುಗೆಗೆ ಪ್ರತಿದಿನವೂ ಪೂಜೆ ಸಲ್ಲಿಸುವುದುಂಟು. ಗದ್ದುಗೆಯ ಮೇಲೆ ಸಕ್ಕರೆಯ ಪುಡಿ ಸಾಕಷ್ಟಿದ್ದರೂ ನೋಣ ಕೂಡದಿರುವುದು. ಇರುವೆ ಮುತ್ತದಿರುವುದು ಕುತೂಹಲವನ್ನುಂಟು ಮಾಡುತ್ತದೆ ಇದುವೆ ಗೆದ್ದುಗೆಯ ಪಾವಿತ್ರ್ಯದ ಸಂಕೇತವೆಂದು ಜಾಗೃತ ಸ್ಥಳವೆಂದು ಭಾವುಕ ಭಕ್ತಾದಿಗಳ ಅಭಿಪ್ರಾಯ. ಗೆದ್ದುಗೆಯ ಮೇಲೆ ಸುಂದರವಾದ ಕಟ್ಟಡ ವಿದೆ. ಸುತ್ತಲೂ ಕೆಲವೊಂದು ಕೋಣೆಗಳಿವೆ. ಮಠದೊಳಗೆ ಮಧ್ಯದ ಆವರಣದಲ್ಲಿನ ಮಂಟಪದಲ್ಲಿನ ನಂದಿವಿಗ್ರಹವಿದೆ. ಅಲ್ಲಮ ಪ್ರಭುದೇವರ ಗದ್ದುಗೆಯ ಮುಂದಿರುವ ಬಯಲಾಯಿತೆಂದು ಜನಪದ ನಂಬುಗೆ ಅಲ್ಲಮ ಪ್ರಭುದೇವರ ಗದ್ದುಗೆಯ ಸುತ್ತಲಿನ ಪ್ರದೇಶದವಿಂದು ಸ್ಮಶಾನ ಭೂಮಿಯಾಗಿ ಬಳಕೆಯಾಗುತ್ತಿರುವುದು ತುಂಬಾ ದುರ್ದೈವದ ಸಂಗತಿಯಾಗಿದೆ. ಸ್ಮಶಾನ ಭೂವಿಗೆ ಪರ್ಯಾಯ ವ್ಯವಸ್ಥೆ ಮಾಡಿಕೊಂಡು ಮೂಲ ಸ್ಥಳಗಳನ್ನು ಉಳಿಸಿಕೊಳ್ಳಬೇಕಾದದ್ದು ಅನಿವಾರ್ಯವಾಗಿದೆ.

೭) ಮೋಳಿಗೆ ಮಾರಯ್ಯಾನ ಗವಿ

ಇದು ಬಸವಕಲ್ಯಾಣದಿಂದ ೨೦ ಕಿ. ಮೀ. ದೂರದಲ್ಲಿದೆ. ರಾಷ್ಟ್ರೀಯ ಹೆದ್ದಾರಿಯ ಪಕ್ಕದ ಮೋಳಕೇರಾ ಗ್ರಾಮದಲ್ಲಿದೆ. ಇದು ಭೂ ಮ್ಯಾಂತರ್ಗತವಾದ ಗವಿ ಮೆಟ್ಟಲುಗಳ ಮೂಲಕ ಇಳಿಯಬೇಕು. ಜಂಬಿಟ್ಟಿಗೆಯ ಪ್ರಸ್ಥಭೂಮಿಯೊಳಗೆ ಈ ಗುಹೆ ಕೋಣೆ ಹಾಗೂ ಸ್ಥಂಭ ಎಂಬ ಗಣಿಗಾರಿಕೆ ವಿಧಾನದಲ್ಲಿ ಕೊರೆಯಲಾಗಿದೆ. ಸುಮಾರು ೫೦ ಅಡಿಗಳಷ್ಟು ಉದ್ದ – ಅಗಲವಾಗಿರುವ ಈ ಗವಿ ತುಂಬಾ ವೈಶಿಷ್ಟ್ಯ ಪೂರ್ಣವಾಗಿದೆ.

ಗವಿಯ ಒಳ ಭಾಗದಲ್ಲಿ ಸ್ಥಾವರ ಲಿಂಗವನ್ನು ಸ್ಥಾಪಿಸಿ ಪೂಜಿಸಲಾಗಿದೆ. ಕಾಶ್ಮೀರದ ಸಾವಲಕ್ಷ ಪ್ರಾಂತದ ಭಕ್ತನೊಬ್ಬನು ಒಳ್ಳೆಯ ಗುಹೆಯನ್ನು ಕೊರೆದಿದ್ದಾನೆಂದು ಅನಿಸುತ್ತದೆ. ಗ್ರಾಮಸ್ಥರ ಪ್ರಯತ್ನದಿಂದಾಗಿ ಗವಿಯ ಮೇಲೆ ಸುಂದರ ದೇವಾಲಯ ನಿರ್ಮಾಣಗೊಂಡಿದೆ. ಗವಿಯ ಮೇಲ್ಭಾಗದಲೊಂದು ಮಾರಯ್ಯಾನು ನಟ್ಟಿರುವನೆಂದು ಹೇಳಲಾಗುವ ಅನಾಮಧ್ಯೆಯ ಮರವಿದೆ. ಈ ಮರವನ್ನು ಯಾರು ಕೂಡ ಯಾವು ಹೆಸರಿನಿಂದಲು ಕರೆಯಲಾಗಿಲ್ಲ.

ಇನ್ನಿತರ ಸ್ಮಾರಕಗಳು

ಉರಿಲಿಂಗ ಪೆದ್ದಿಯವರ ಮಠವು ಬಸವಕಲ್ಯಾಣದ ಹಜರತ ರಾಜಬಾಗ ಸವಾರ ದರ್ಗಾದ ಪಶ್ಚಿಮ ದಿಕ್ಕಿನಲ್ಲಿ ಹರಿಜನರ ಓಣಿಯಲ್ಲಿದೆ. ಬಸವಕಲ್ಯಾಣದಿಂದ ೧೮ ಕಿ.ಮೀ. ದೂರದ ಮಹಾರಾಷ್ಟ್ರ ರಾಜ್ಯದ ನಿಲಂಗಾ ತಾಲ್ಲೂಕಿನ ದೇವರ ಹಾಲಳ್ಳಿಯಲ್ಲಿ ಚೆನ್ನಬಸವಣ್ಣನವರ ಗವಿಯಿದೆ. ಹುಮನಾಬಾದ ತಾಲ್ಲೂಕಿನ ಹಳ್ಳಿಖೇಡ ಗ್ರಾಮದಲ್ಲಿ ಕಿನ್ನರಿ ಬೊಮ್ಮಯ್ಯನ ಮಠವಿದೆ. ಬೀದರ ತಾಲ್ಲೂಕಿನ ಚಿದ್ರಿಯಲ್ಲಿ ಮೇದಾರ ಕೇತ್ಯಯನ ಹಾಗೂ ರೇಕೊಳಗಿಯಲ್ಲಿ ಬಹುರೂಪಿ ಚಾಡಯ್ಯನ ಗವಿಗಳಿವೆ. ಔರಾದ ತಾಲ್ಲೂಕಿನ ಸಂತಪೂರ ಸಮೀಪದ ಧೂಪತಮಾಗಾಂವದಲ್ಲಿ ಶರಣೇ ಗೊಗ್ಗವೆಯ ಸ್ಮರಣಾರ್ಥವಾಗಿ.. ನಿರ್ಮಿಸಲಾದ ಪ್ರಾಚೀನ ದೇವಾಲಯವಿದೆ. ಭಾಲ್ಕಿಯಲ್ಲಿ ಕುಂಬಾರ ಗುಂಡಯ್ಯನ ಗವಿ ಘಾಟ ಬೊರಾಳದ ದಕ್ಷಿಣ ದಿಕ್ಕಿಗೆ ಶಂಕರ ದಾಸಿಮಯ್ಯನ ಗವಿಗಳಿವೆ.

ಲಕ್ಷದ ತೊಂಬತ್ತಾರು ಸಾವಿರ ಶಿವ ಶರಣರಿರುವ ಈ ನಾಡಿನಲ್ಲಿ ಸಿಕ್ಕಿರುವ ಶಿವ ಶರಣರ ಸ್ಮಾರಕಗಳು ಅತ್ಯಲ್ಪ. ಕಾಲನ ದವಡೆಯಲ್ಲಿ ಎಷ್ಟೊ ಸ್ಮಾರಕಗಳು ನಾಶವಾಗಿವೆ. ಉಪಲಬ್ದವಿರುವ ಎಲ್ಲಾ ಸ್ಮಾರಕಗಳು ಇಂತಹವರದ್ದೇ ಎಂದು ಖಚಿತವಾಗಿ ಹೇಳುವಂತಿಲ್ಲ. ಇವೆಲ್ಲ ಮೌಖಿಕ ಸಂಪ್ರದಾಯದ ಮೇರೆಗೆ ಹೇಳಲಾಗಿದೆ. ಕಲ್ಯಾಣದ ಕ್ರಾಂತಿಯ ತರುವಾಯ ಚದುರಿ ಹೋದ ಶಿವ ಶರಣರು ಸ್ಮಾರಕಗಳು ಅವರೊಂದಿಗೆ ನಾಡಿನ ತುಂಬೆಲ್ಲಾ ಹರಿದಿವೆ. ಅವುಗಳನೆಲ್ಲ ಕ್ಷೇತ್ರ ಕಾರ್ಯ ಕೈಗೊಂಡು ಸಂಶೋಧನೆ ನಡೆಸಿ ನಿರ್ಧರಿಸಬೇಕಾದ ತುರ್ತಿನ ಕಾರ್ಯವಾಗಬೇಕಾಗಿದೆ.

ಐತಿಹಾಸಿಕ ಸಾಂಸ್ಕೃತಿಕವಾಗಿರುವ ಸ್ಮಾರಕಗಳಿಂದು ಶಿಥಿಲಾವಸ್ಥೆಯಲ್ಲಿವೆ. ದಯನೀಯ ಸ್ಥಿತಿಯಲ್ಲಿರುವ ಪ್ರಜ್ಞಾವಂತ ಸಂಘಟನೆಗಳು, ಪುರಾತತ್ವ ಇಲಾಖೆ, ಪ್ರವಾಸೋದ್ಯಮ ಇಲಾಖೆಗಳು ಕಾಳಜಿ ವಹಿಸಿ ಅಭಿವೃದ್ದಿ ಪಡಿಸಬೇಕು. ಪ್ರತಿ ಸ್ಮಾರಕಗಳಲ್ಲಿರುವ ಇತ್ತೀಚಿನ ಭಾವ ಚಿತ್ರಗಳನ್ನು ತೆಗೆದುಹಾಕಿ ಮೂಲ ಸ್ಥಿತಿಯನ್ನು ರೇಖಾಚಿತ್ರ ಪ್ರವೇಶಗಳ ಮೂಲಕ ದಾಖಲಿಸುವುದು ಅಗತ್ಯವಾಗಿದೆ. ಇವೆಲ್ಲವುಗಳಿಗಿಂತ ಸೂಕ್ತ ರೀತಿಯಲ್ಲಿ ಸ್ಮಾರಕಗಳನ್ನು ಪುನರುಸ್ಥಾನಗೊಳಿಸಿ ಮುಂದಿನ ಪೀಳಿಗೆಗೆ ಕಾಯ್ದಿಡಬೇಕಾದ ಜವಾಬ್ದಾರಿ ನಮ್ಮೆಲ್ಲರದ್ದಾಗಿದೆ.

# ಬೀದರ ತಾಲ್ಲೂಕಿನ ಶರಣ ಸ್ಮಾರಕಗಳು

* ಶ್ರೀ ಭಕ್ಕ ಪ್ರಭುವಿನ ದೇವಸ್ಥಾನ
* ಶ್ರೀ ಲಿಂಗೇಶ್ವರ ದೇವಸ್ಥಾನ
* ಶ್ರೀ ವೀರಭದ್ರೇಶ್ವರ ದೇವಸ್ಥಾನ

# -: ಬಕ್ಕ ಪ್ರಭುವಿನ ದೇವಸ್ಥಾನ :-

ಆಂಧ್ರ ಪ್ರದೇಶದ ಮೇದಕ್ ಜಿಲ್ಲೆಯ ಸದಾಶೀವ ಪೇಟೆಯಿಂದ ೧೦ ಕೀ. ಮೀ ದೂರದ ಆತ್ಮಕೂರ ಎಂಬ ಗ್ರಾಮದಲ್ಲಿ ಸುಮಾರು ೧೯ ನೇ ಶತಮಾನದ ಮೋದಲನೆಯ ಘಟ್ಟದಲ್ಲಿ ಶಿವಭಕ್ತರಾದ ಲಿಂಗಾಯತ್ ಧರ್ಮದ ಭೌರಮ್ಮ - ಭೋಜಪ್ಪಾ ಎಂಬ ದಂಪತಿಗಳು ವಾಸಿಸುತ್ತಿದ್ದರು. ಇವರು ದಿನನಿತ್ಯವೂ ಶಿವನ ಧಾನ್ಯದಲ್ಲಿಯೆ ಲೀನರಾಗಿರುತ್ತಿದ್ದರು. ಅತಿಥಿ ದೇವೂಭವ ಎಂಬ ವಾಕ್ಯವನ್ನು ಚಾಚು ತಪ್ಪದೇ ಪಾಲಿಸುವಂತಹ ಪುಣ್ಯಾತ್ಮರಾಗಿದ್ದರು. ಈ ದಂಪತಿಗಳಿಗೆ ಮೊದಲು ಒಂದು ಗಂಡು ಮಗು ಜನಿಸಿತು ಆತನಿಗೆ ಬಸಪ್ಪನೆಂದು ಹೆಸರಿಟ್ಟರು.

ಶಿವನ ನಾಮ ಸ್ಮಾರಣೆಯಲ್ಲೆ ಇರುತ್ತಿದ್ದ ಈ ದಂಪತಿಗಳಿಗೆ ಶಿವನ ಅನುಗ್ರಹದಿಂದ ತಮ್ಮ ಉದರದಲ್ಲಿ ಶಿವನ ಪ್ರತಿ ರೂಪದ ಅಂಶವುಳ್ಳ ಶಿಶು ಜನ್ಮಿಸುತ್ತದೆಂಬ ಭಾವನೆ ಸದಾ ಮನಸ್ಸಿನಲ್ಲಿ ಅಚ್ಚುತ್ತಿತ್ತು. ಇದರಿಂದಾಗಿ ಆ ಭಕ್ತರು ಶಿವನ ಧನ್ಯಾದಲ್ಲಿ ಮಗ್ನರಾಗಿ ಅವ್ಯಕ್ತ ಆನಂದದಲ್ಲಿ ತೇಲಾಡುತ್ತಿದ್ದರು.

ಪ್ರಭುವಿನ ಜನನ

ಶಾಲಿವಹನ ಶಕೆ ೧೭೩೭ ಶ್ರೀಮುಖ ಸಂವತ್ಸರ ಮಾಘ ಚರ್ತುದರ್ಶಿ ಕ್ರಿ.ಶ. ೧೯-೦೨-೧೮೧೫ ರಂದು ಭೌರಮ್ಮ ತೇಜಸ್ವಿಯಾದ ಕಾಂತಿಯುಕ್ತವಾದ ಎರಡನೇ ಗಂಡು ಮಗುವಿಗೆ ಜನ್ಮವಿತ್ತಳು. ಮನೆಯವರೆಲ್ಲ ತುಂಬಾ ಸಂತೋಷ ಪಟ್ಟರು. ಆ ಮಗುವಿನ ಹೆಸರು ಬಕ್ಕಪ್ಪ ಎಂದು ನಾಮವಿತ್ತರು. ಪ್ರತಿಯೊಬ್ಬ ತಂದೆ – ತಾಯಿಯರು ಆಶಿಸುವುದು ತನ್ನ ಮಕ್ಕಳು ಏನಾದರೂ ಸಾಧನೆ ಮಾಡಬೇಕು. ತನ್ನ ಜೀವನ ಇತರ ಜನಸಾಮನ್ಯರ ಉಪಯೋಗಕ್ಕೆ ಬರುವಂತೆ ಜನ್ಮ ಸಾರ್ಥಕ ಮಾಡಿಕೊರ್ಳಳಬೇಕೆಂಬುದೆ ಅವರು ಬಯಸುವರು..ಅಂತೆಯೇ ಭೌರಮ್ಮ – ಭೋಜಪ್ಪ ದಂಪತಿಗಳು ತಮ್ಮ ಎರಡನೇಯ ಮಗು ಮಹಾತ್ಮನಾಗುವನೆಂಬ ನಂಬಿಕೆ ಇರಿಸಿದರು.

ಬಕ್ಕಪ್ಪನ ಜನನದ ನಂತರ ಆ ದಂಪತಿಗಳಿಗೆ ಮತ್ತೆ ಒಂದು ಗಂಡು ಹಾಗೂ ಹೆಣ್ಣು ಶಿಶುಗಳಾದವು. ಮೂರನೇ ಮಗು ಮಹಾತ್ಮನಾಗುವನೆಂಬ ನಂಬಿಕೆ ಇರಿಸಿದರು ಮೂರನೆ ಮಗನ ಹೆಸರು ಗುರಪ್ಪ ಎಂದು (ಹೆಣ್ಣು ಮಗುವಿನ ಹೆಸರು ತಿಳಿದಿಲ್ಲ) ಆನಂತರ ಈ ವಂಶದಲ್ಲಿ ಬಂದವರೆಂದರೆ ಬಸಪ್ಪ ನಿರಂಜನಪ್ಪ, ಬಕ್ಕಪ್ಪ ಮುಂತಾದವರು. ಪ್ರಭುವಿನ ಬಾಲ್ಯ ಜೀವನ ಆತ್ಮಕೂರದಲ್ಲಿಯೇ ಕಳೆಯಿತು. ಇವರು ಪಾಠ ಶಾಲೆಗಳಿಗಳಿಗಿಂತಲೂ ಗೆಳಯರೊಂದಿಗೆ ಆಟ ಪಾಠಗಳಲ್ಲಿಯೇ ಹೆಚ್ಚಿನ ಆಸಕ್ತಿ ತೋರಿಸುತ್ತಿದ್ದರು ವಿದ್ಯೆಯ ಅಧ್ಯಾತ್ಮಿಕ ಮಾರ್ಗದರ್ಶಿ ಎಂದು ನಂಬಿದ್ದರು. ಪ್ರಯಾಣ ಮಾಡುವವರಿಗೆ ಪ್ರತ್ಯಕ್ಷವಾಗಿ ಉಪಯೋಗವಾಗುತ್ತಿರಲಿಲ್ಲ. ಪರೋಕ್ಷ ವಿದ್ಯೆ ಬ್ರಹ್ಮ ವಿದ್ಯೆ ಕಲಿಯುವುದಕ್ಕೆ ಜಿಜ್ಞಾಷೆಗಳನ್ನು ಗುರುಗಳು ಪರಿಪಕ್ವ ಹೊಂದಿದ ಜೀವಿಗಳಲ್ಲಿ ಹುಡಕಿ ಕೊಳ್ಳಬೇಕಾಗಿತ್ತು.

ಪಾಠ ಶಾಲೆಯಲ್ಲಿ ಬೋಧಿಸುವ ವಿದ್ಯೆಯ ಪ್ರವೃತ್ತಿಗೆ ಲೋಕ ಜೀವಂತ ಮಾರ್ಗವನ್ನು ತೋರಿಸುತ್ತಿತ್ತು. ಪ್ರಭುಗಳು ಶಿಕ್ಷಣಕ್ಕೆ ಯಾವುದೇ ಆಸ್ತಕಿ ತೋರಿಸದೇ ಪ್ರಕೃತಿ ಮತ್ತು ಗೆಳೆಯರೊಂದಿಗೆ ತಮ್ಮ ಹೆಚ್ಚಿನ ಸಮಯವನ್ನು ಕಳೆಯುತ್ತಿದ್ದರು. ಭೌರಮ್ಮ ತಿಳಿದುಕೊಳ್ಳುತ್ತಿದ್ದ ಧಾರ್ಮಿಕ ಗ್ರಂಥಗಳು, ವೇದ, ಉಪನಿಷತ್ತುಗಳ ಮುಂತಾದ ಪವಿತ್ರ ಸಿದ್ಧಾಂತದ ಅಂಶಗಳು ಪ್ರಭುವು ತಾಯಿಯ ಉದರದಲ್ಲಿಯೇ ತಮ್ಮ ದೇಹ ಮನಸ್ಸುಗಳೆರಡರಲ್ಲಿಯು ಅಳವಡಿಸಿಕೊಂಡಿದ್ದರು.

ಪ್ರಭುಗಳು ಹೆಚ್ಚಿನ ಸಮಯ ಬಾಲ್ಯ ಮಿತ್ರರೊಂದಿಗೆ ಸಮೀಪದ ಅರಣ್ಯದೊಳಗೆ ವಿವಿಧ ಆಟ ಪಾಠಗಳೊಂದಿಗೆ ನಿಸರ್ಗದಿಂದಲೆ ಜ್ಞಾನವನ್ನುಪಡೆದು ಕೊಂಡರು. ಬಕ್ಕಪ್ರಭುಗಳು ಮಹಾ ಜ್ಞಾನಿಗಳೆಂದು ಆತನ ತಂದೆಗೆ ತಿಳಿದಿತ್ತು. ಆದರೆ ತನ್ನ ಮಗನಿಗೆ ಯೋಗ್ಯನಾದ ಗುರು ಯಾರು ದೊರೆಯುವರು ಎಂಬ ವಿಷಯ ತಿಳಿದಿರಲ್ಲಿಲ್ಲ.

ಜೀವನ ಪ್ರಕೃತಿ ದತ್ತ ನಿಯಮವಾಗಿದೆ. ಇದರಿಂದ ದೂರವಿರಲು ಯಾರಿಗೂ ಸಾಧ್ಯವಿಲ್ಲ. ಈ ಶರೀರವು ಅದಕ್ಕೆ ಬಾಗಿಯೇ ನಡೆಯುಬೇಕಾಗುತ್ತದೆ. ಬಾಲ್ಯ, ಯೌವನ, ಮುಪ್ಪು ಈ ಶರೀರ ಧರ್ಮಗಳಿಂದ ಯಾರಿಗೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಈ ಶರೀರಕ್ಕೆ ಬಾಲ್ಯ, ಯೌವನ, ಮುಪ್ಪು ಬಂದು ಕೊನೆಗೆ ಸಾವನ್ನಪ್ಪುತ್ತದೆ. ಆದರೆ ಮನದಲ್ಲೊಮ್ಮೆ ಜ್ಞಾನ ಭಂಡಾರವು ಬಿತ್ತಿ ಬೆಳೆಸಿದರೆ ಅದು ಹೆಮ್ಮರವಾಗಿ ಬೆಳೆದು ಅದರ ಸವಿಯ ಇತರರಿಗೆ ಹಂಚಿದರೆ ಅದು ವಿಶಾಲವಾಗಿ ಹರಡಿ ಅಮೃತ ಸೇವಿಸಿದಂತೆ ಅಮರವಾಗಿರುತ್ತದೆ. ಬಕ್ಕಪ್ರಭುಗಳು ತಮ್ಮ ಬಾಲ್ಯ ಮಿತ್ರರಿಗೆ ಅನೇಕ ಚಮತ್ಕಾರಗಳನ್ನು ಮಾಡಿ ಆಶ್ಚರ್ಯಪಡಿಸುತ್ತಿದ್ದರು. ಅದಕ್ಕೆ ಧನ್ಯಪ್ರಭು, ಬಕ್ಕಪ್ರಭು ಎಂಬ ಪ್ರೀತಿಯ ಮಾತುಗಳು ಮಿತ್ರರಿಂದ ಬರುತ್ತಿದ್ದವು. ಬಕ್ಕ ಪ್ರಭುವಿನಲ್ಲಿ ಗುರುವಿನ ದರ್ಶನವು ಆಗಲೇ ಕೆಲವರು ದರ್ಶಿಸಿದ್ದರು.

" ಜ್ಞಾನ ಶಕ್ತಿ ಸಮರೂಢ ತತ್ವಮಾಲಾವಿ ಭೂಶೀತಃ ಭಕ್ತಿ ಮುಕ್ತಿ ಪ್ರಧಾಚತ ತಸ್ಮೈ ಶ್ರೀಗುರುವೇ ನಮ್ಮಃ ಎಂದು ಪ್ರಭುವನ್ನು ಭಾವಿಸಲು ಪ್ರಾರಂಭಿಸಿದರು. ಪ್ರಭುವಿನ ಸ್ವರೂಪವು ಜ್ಞಾನ ಶಕ್ತಿಯ ಸಮನ್ವಯ ಅಂದರೆ ಕಾರ್ಯಕಾರಣಗಳ ಸಮೂಹಕ ಸರ್ವ ತತ್ವಗಳುಳ್ಳವರಿಗೆ ಸ್ಪಷ್ಟವಾದ ಮನಸ್ತಾಪ ಇರುತ್ತಿದ್ದವು. ಆದ್ದರಿಂದ ಅವರ ಆಶ್ರಯ ಪಡೆದವರಿಗೆ ತಾಕಿತ ಜೀವನದಲ್ಲಿ ಸುಖವನ್ನು, ಅತಾಕಿಕ ಜೀವನದಲ್ಲಿ ಮುಕ್ತಿಯನ್ನು ಅನುಗ್ರಹಿಸುತ್ತಿದ್ದರು. ಆದ್ದುರಿಂದ ಪ್ರಭುವಿನ ಮಿತ್ರರು ಅವರ ಸಾನಿಧ್ಯವನ್ನು ಪಡೆಯಲುಚ್ಛಿಸುತ್ತಿದ್ದರು.

ಯಾವುದೇ ವಿಷಯ ತಿಳಿದುಕೊಳ್ಳಬೇಕಾದರೆ ಅದು ಎಲ್ಲರಿಂದಲೂ ಸಾಧ್ಯವಿಲ್ಲದ ಮಾತು. ಆ ಮಾರ್ಗದಲ್ಲಿ ಸಂಚರಿಸುವವರಿಗೆ ಇಲ್ಲವೇ ಆ ಕ್ಷೇತ್ರದ ಮಾಹಿತಿ ಇದ್ದವರಿಗೆ ಮಾತ್ರ ಅದರ ಅರಿವು ಉಂಟಾಗುತ್ತದೆ. ಅದರಂತೆ ಮಹಾತ್ಮರನ್ನು ಗುರುತಿಸುವುದು ಮಹಾತ್ಮರಿಗೆ ಮಾತ್ರ ಸಾಧ್ಯವಾದ ಅಂಶ. ಬಾಲ್ಯದಲ್ಲಿಯೇ ಪ್ರಭುವಿನ ಮುಖದ ಮೇಲಿನ ತೇಜಸ್ಸು ಕಾಂತಿ ಅಂತರ್ಗತ ಭಾವವನ್ನು ಗುರುತಿಸಿದ ಕೆಲವು ಮಹಾಜನರು ಈತನು ಅವತಾರ ಪುರುಷನೆಂದು ಭಾವಿಸುತ್ತಿದ್ದರು.

೬ ತಪಃ ಸಾಧನೆ

ಗೊಟ್ಟಂಗೊಟ್ಟಿ ಸ್ಥಳವು ಗಿಡಮರಗಳಿಂದ, ಪ್ರಾಣಿಪಕ್ಷಿಗಳಿಂದ ಕೂಡಿದ ಘನಿಷ್ಟವಾದ ಈ ಅರಣ್ಯವೂ ವೃಕ್ಷಲತಾದಿಗಳಲ್ಲಿ ಹಸಿರು ಹಸಿರಾಗಿ ನೋಡುಗರಿಗೆ ಅತ್ಯಂತ ಹೃದಯಂಗಮಯವಾದ ಪ್ರದೇಶವಾಗಿದೆ.

ಇಲ್ಲಿನ ಪರ್ವತ ಶ್ರೇಣಿಗಳ ಮೇಲಿನಿಂದ ದಕ್ಷಿಣಾಭಿಮುಖವಾಗಿ ಹರಿಯುವ ನೀರಿನ ಅಲೆಗಳು ಮಲೆ ನಾಡಿನ ನೆನಪನ್ನು ತರಿಸುತ್ತವೆ. ಒಟ್ಟಾರೆ ಪ್ರಶಾಂತವಾದ ಈ ಪ್ರಾಂತವು ತಪಸ್ವಿಗಳಿಗೆ ಯೋಗ್ಯವಾದ ಸ್ಥಳವೆಂದು ಹೇಳಬಹುದು. ಮಹಾಭಾರದಲ್ಲಿ ಪಾಂಡವರು ಅಜ್ಞಾತವಾಸ ಮಾಡಿದ ಪ್ರದೇಶವು ಮತ್ಸ್ಯದೇಶ. ಇದರ ರಾಜಧಾನಿ ವೀರಾಟ ನಗರ ಗೊಟ್ಟಲ ಪಾಂತ್ಯವು ವೀರಾಟ ನಗರವಾಗಿ ಅದರ ಪರಿಸರವಾಗಿ ಭಾವಿಸಲ್ಪಡುತ್ತದೆ. ಗಂಗಾಕತ್ವ ನದಿತಾರದ ಮಹಾತ್ಮನು ಪ್ರಭುವಿಗೆ ಈ ಸ್ಥಳವು ನಿನ್ನ ತಪಸ್ಸಿಗೆ ಯೋಗ್ಯವಾದದು ಎಂದು ನಿರ್ಧರಿಸಿದ ಮೇಲೆ ಪ್ರಭುವು ತಮ್ಮ ಸಂಸಾರ ಸಮೇತವಾಗಿ ಬಂದು ಅಲ್ಲಿ ತಪಸ್ಸಿಗೆ ಕುಳಿತರು. ಇವರ ಆಗಮನದಿಂದ ಆ ಪ್ರದೇಶವು ತಪ್ರೋವನವಾಗಿ ಶಾಂತಿ ಧಾಮವಾಗಿ ಮಾರ್ಪಟ್ಟಿತ್ತು. ಅಲ್ಲಿ ನೆಲೆಸುತ್ತಿದ್ದ ಪಶು - ಪಕ್ಷಿ, ಮೃಗಗಳೆಲ್ಲಾ ಪ್ರೀತಿ, ಪ್ರೇಮಭಾವದಿಂದ ವರ್ತಿಸುತ್ತಿದ್ದವು. ಪ್ರಭುಗಳ ಜೊತೆಗೂಡಿ ಈಶ್ವರ ಧಾನ್ಯದಲ್ಲಿ ಮಗ್ನವಾಗಿ ತಮ್ಮ ಆಹಾರವು ಗಡ್ಡೆ ಗೆಣಸು ಸಸ್ಯೆಯನ್ನು ಸ್ವೀಕರಿಸಿ ಆನಂದದಿಂದ ವಾಸಿಸುತ್ತಿದ್ದವು.

ಸಮಚಿತ್ತರಾದ ಪ್ರಭುಗಳು ಸುಖಃ ದುಃಖಗಳನ್ನು ಸಮ್ಮಿಶ್ರವಾಗಿ ಸ್ವೀಕರಿಸುತ್ತಿದ್ದರು. ಅಲ್ಲದೇ ಸುತ್ತಲಿನ ಜನರ ಪ್ರೀತಿ ಪ್ರೇಮದಿಂದ ವರ್ತಿಸುತ್ತಾ ಶತ್ರುಗಳನ್ನು ಮಿತ್ರರನ್ನಾಗಿ ಅವಮಾನಗಳನ್ನು ಸನ್ಮಾನಗಳನ್ನಾಗಿ ಮಾರ್ಪಡು ಮಾಡುತ್ತಿದ್ದರು. ಅವರ ಮುಖದಲ್ಲಿನ ಈಶ್ವರನ ತೇಜಸ್ಸುಕಾಂತಿ ನಿರಂತರ ಪ್ರಾಶಮಾನವಾಗಿ ಹೊಳೆಯುತ್ತಿತ್ತು.

ಬೇಸಿಗೆಯ ಬಿಸಿಲಿನಿಂದ ಅರಣ್ಯದಲ್ಲಿನ ತಾಮುವು ಹೆಚ್ಚಿಸುತ್ತಿತ್ತು. ನೀರಿಗಾಗಿ ಪ್ರಾಣಿ - ಪಕ್ಷಿಗಳು ವನವನ್ನೇಲ್ಲಾ ತಿರುಗಾಡುತ್ತಿದ್ದವು. ಪ್ರಭುವು ಬಾಯಾರಿಕೆಯಿಂದ ನೀರಿಗಾಗಿ ಹುಡುಕುತ್ತಾ ಹೋಗುವಾಗ ಎಲೆಗಳಿಂದ ತುಂಬಿದ ಒಂದು ಬಾವಿಯನ್ನು ಕಂಡರು. ನಿಧನವಾಗಿ ಆ ಎಲೆಗಳನ್ನು ಸರಿಸಿ ಬಾವಿಯಿಂದ ಸ್ವಲ್ಪ ಸ್ವಲ್ಪವಾಗಿ ನೀರನ್ನು ತೆಗೆದು ಮೇಲೆಳೆಯುವಷ್ಟರಲ್ಲಿ ಎದುರಿಗೆ ಗಂಗಾಕತ್ವ ನದಿ - ತೀರದ ಮಹಾತ್ಮರು ಪ್ರತ್ಯಕ್ಷರಾದರು. ಅರಣ್ಯದಲ್ಲಿ ಆದ ಈ ಗಂಗಾದರ್ಶನದ ಘಟನೆ ಅವರಿಗೆ ಹೊಸ ಜೀವನಾರ್ಥವನ್ನು ತಿಳಿಸಿತು ಅಂದಿನಿಂದ. ಬಕ್ಕಪ್ರಭು ಎಂದಾಯ್ತು. ಗಂಗಾಕತ್ವ ನದಿತೀರದ ಮಹಾತ್ಮ ಗುರುವಿನ ದರ್ಶನದಿಂದ ಪ್ರಭುವಿನ ಮನಸ್ಸಿಗೆ ತಪಸ್ಸಿಗೆ ನವ ಚೇತನ ಸಿಕ್ಕಿತು.

ಪ್ರಭುವಿಗೆ ಒಕ್ಕೂಲತನ ಮಾಡಬೇಕೆನ್ನಿಸಿತು. ಭೂಮಿಯನ್ನು ಹದ ಮಾಡಿ ಜೋಳವನ್ನು ಬಿತ್ತದರು. ಬೆಳೆಯು ಚೆನ್ನಾಗಿ ಬೆಳೆಯಿತು ಪ್ರತಿ ದಿವಸವೂ ಹಕ್ಕಿಗಳಿಗೆ ತಿನ್ನುವುದಕೋಸ್ಕರ ಬೆಳದ ಬೆಳೆಯಲ್ಲಿ ಒಂದು ಭಾಗದಂತೆ ತೆಗೆದು ಆ ಸ್ಥಳದಲ್ಲಿ ಬೇರೆ ಭಾಗದಲ್ಲಿಡುತ್ತಿದ್ದರು. ಮತ್ತು ಪಕ್ಷಿಗಳಲ್ಲದೇ ಬೇಡುವರಿಗೂ ಧಾರಳವಾಗಿ ಧಾನ ಮಾಡುತ್ತಿದ್ದರು ಇದ್ದರಿಂದ ಪ್ರಭುವು ವಾಸಿಸುತ್ತಿರುವ ಪ್ರದೇಶದಲ್ಲಿ ಪಶು - ಪಕ್ಷಿಗಳು ಅತ್ಯಂತ ಸಂತೋಷದಿಂದ - ನೆಮ್ಮದಿಯಿಂದ ಪ್ರಭುವಿನ ಗುಣ- ಗಾನ ಮಾಡುತ್ತ ವಾಸಿಸುತ್ತಿದ್ದವು.

ಪ್ರಭುವು ಸಮಾಧನ ಚಿತ್ತರಾಗಿ ತಾತ್ವಿಕ ವಿಚಾರ. ವೈಚಾರಿಕತೆ ವಿವಿಧ ವಿಷಯಗಳ ಕುರಿತು ಅತ್ಯಂತ ಮಾರ್ಮಿಕವಾಗಿ ಪರಿಚಯ ನೀಡಿದರು. ಅಲ್ಲಿನ ಭಕ್ತರು ಪ್ರಭುವಿನ ಸೌಜನ್ಯಕ್ಕೆ ತಮಃ ಶಕ್ತಿಗೆ ಏಕಗ್ರತೆಗೆ ಬೆರಗಾಗಿ ಅವರಿಗೆ ವಂದಿಸಿದರು. ನಮ್ಮ ಈ ಭಜನೆ ವಿಚಾರಗೊಷ್ಠಿಯಲ್ಲಿ ತಾವು ಪ್ರತಿ ದಿನವು ಪಾಲ್ಗೊಳ್ಳಬೇಕೆಂದು ಪ್ರಾರ್ಥಿಸಿ ಕೊಂಡಾಗ ಪ್ರಭವು ಆ ಮಾತಿಗೆ ತಮ್ಮ ಒಪ್ಪಿಗೆಯನ್ನು ನೀಡಿದರು. ಆ ಸಜ್ಜನರು ಪ್ರಭುವಿನ ಜೊತೆ ಸೇರಿ ಪ್ರತಿ ದಿವಸವು ಮಧ್ಯರಾತ್ರಿಯವರಿಗೆ ವೇದಾಂತ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಈಗಾಲೂ ಆ ಸ್ಥಳದಲ್ಲಿ ಗುಹೆಯನ್ನು ಕಾಣುತ್ತೇವೆ. ಪ್ರಭುವಿನ ಗುಹಾ ಪ್ರವೇಶದಿಂದ ಅವರ ಆಧ್ಯಾತ್ಮಿಕ ಪರಿಣಿತಿಯ ಮೆಟ್ಟಿಲನ್ನು ಹೆಚ್ಚಿಸುತ್ತದೆ. ಅವರಿಂದ ಈ ಒಂದು ಕಲ್ಯಾಣಕಾರಿಯಾದ ಉಪಯೋಗವಾಯಿತು.

## ಸಿದ್ಧ ಕುಂದ

ಪ್ರಭುಗಳ ದರ್ಶನದಿಂದ ಭಾಸ್ಕರ ಮಹಾರಾಜರ ಮನಸ್ಸು – ದೇಹಗಳೆರಡು ಉಲ್ಲಾಸಭರಿತವಾದವು. ಆಮೇಲೆ ಅವರು ಪ್ರಭುವಿನ ಆ ವೃತ್ತಾಂತವಾಣಿಯನ್ನು ಕೇಳುತ್ತಾ ಸಂತೋಷದಿಂದ ಕಳೆದರು. ಪೂಜಾ ಸಮಯವಾದ್ದರಿಂದ ಸ್ನಾನ ಮಾಡುವುದಕ್ಕಾಗಿ ಭಾಸ್ಕರ್ ಮಹಾರಾಜರು ಅಕ್ಕ ಪಕ್ಕದ ಸ್ಥಳದಲ್ಲೆಲ್ಲಾ ನೀರು ಕಣ್ಣಿಗೆ ಬೀಳಲಿಲ್ಲ. ಇವರ ಮನಸ್ಸಿನ ಸ್ಥಿತಿಯನ್ನು ಅರಿತ ಪ್ರಭುಗಳು ಭಾಸ್ಕರ ಮಹಾರಾಜನಿಗೆ ಹೀಗೆ ಹೇಳಿದರು. "ನಿಮ್ಮ ಈ ಪರದಾಟಕ್ಕೆ ಸ್ನಾನವೆ ಕಾರಣವಾಗಿರಬಹುದು. ತಾರ್ಕಿಕವಾದ ಸ್ನಾನವು ಅಷ್ಟು ಮುಖ್ಯವಾದುದಲ್ಲ. ಬಾಹ್ಯ ಸೌದರ್ಯಕ್ಕಿಂತ ಆಂತರಿಕ ಸೌಂದರ್ಯ ಬಹುಮುಖ್ಯವಾದುದು ನಿಜವಾದ ಸ್ನಾನವೆಂದರೆ ದುರ್ಬಲವಾದ ಮನುಷ್ಯನ ದೇಹದಲ್ಲಿ ಬುದ್ಧಿಯನ್ನು ಪವಿತ್ರವಾಗಿಟ್ಟುಕೊಳ್ಳಬೇಕು. ಪರಿಶುದ್ಧವಾದ ಮನಸ್ಸಿನಿಂದ ನಾವು ಬ್ರಹ್ಮ ಜ್ಞಾನವನ್ನೆ ಪಡೆಯಬಹುದಾಗಿದೆ. ಇದ್ದರಿಂಗಾಗಿ ಪರಮಾನಂದ ಹೊಂದುತ್ತೇವೆ. ಬ್ರಹ್ಮಜ್ಞಾನದಿಂದ ನಿರಂತರವಾಗಿ ಬ್ರಹ್ಮೈಕ್ಯ ಭಾವನುಸಂಧಾನವನ್ನು ಮಾಡಬೇಕು. ಈ ಒಂದು ನಿರಂತರವಾದ ಅನುಸಂಧಾನವೇ ಸ್ನಾನವಾಗಿದೆ. ಜಲ ಮಾತ್ರದಿಂದ ಈ ದೇಹವು ಶುಚಿಮಾಡಿಕೊಂಡರೆ ನಾವು ಪವಿತ್ರವಾಗುವುದಿಲ್ಲ, ನಿಜವಾದ ಪವಿತ್ರತೆ ನಮ್ಮ ಮನಸ್ಸಾಗಿದೆ ಎಂದು ಪ್ರಭುಗಳು ಭಾಸ್ಕರ ಮಹಾರಾಜರಿಗೆ ತಿಳಿಹೇಳಿದರು. ಇದನ್ನಲದೆ ಭಾಸ್ಕರ ಮಹಾರಾಜ ಸಂತೃಪ್ತಿ ಹೊಂದಿ ಅಷ್ಟೆ ಸಮಧಾನದಿಂದ ಅವಧೂತರಂತಹ ನಿಮ್ಮಂತಹವರಿಗೆ ಈ ಭಾವನಡೆಯುತ್ತದೆ. ನಾವೆಲ್ಲ ಜನಸಾಮಾನ್ಯರು ವರ್ಣಾಶ್ರಮಚಾರ ನಿಯಮಕ್ಕೆ ಪಟ್ಟುಬಿದ್ದವರು. ಶಾಸ್ತ್ರವಂತಾಚಾರ್ಯರ ಪ್ರಕಾರ ಈ ಸಂಧ್ಯಾ ಸ್ನಾನವು ತಪ್ಪದೇ ಮಾಡಬೇಕು. ಇದರಿಂದ ಯಾವುದೋ ಒಂದು ರೀತಿಯ ಸಮಾಧಾನ ಮನಸ್ಸಿಗುಂಟಾಗುವದು. ಈ ಒಂದು ಸ್ನಾನ ಮಾಡುವುದು ಲೋಕಕ್ಕೆ ಮಾರ್ಗದರ್ಶನವಾಗುವುದು" ಎಂದು ಮೃದುವಾಗಿ ಉತ್ತರಿಸಿದರು. ಅವರ ಮಾತನ್ನು ಕೇಳಿದ ಪ್ರಭುಗಳು ಅಲ್ಲಿ ನೀರಿನ ವ್ಯವಸ್ಥೆ ಮಾಡಲು ತಮ್ಮದೇ ಮನದಲ್ಲಿ ಸಂಕಲ್ಪಿಸಿಕೊಂಡು ತಕ್ಷಣವೇ ಭಾಸ್ಕರ್ ಮಾಹಾರಾಜರಿಗೆ ಆ ಸ್ಥಳದಲ್ಲಿಯೇ ಒಂದು ಕುಂಡವನ್ನು ನಿರ್ಮಿಸಲು ಹೇಳಿದರು. ಕೂಡಲೆ ಭಾಸ್ಕರ ಮಹಾರಾಜರು ಕುಂಡವನ್ನು ನಿರ್ಮಿಸಿದರು. ಪ್ರಭುಗಳು ಧ್ಯಾನಸ್ತರಾಗಿ ಶಿವನನ್ನು ಪ್ರಾರ್ಥಿಸಿದರು. ಪ್ರಭುವಿನ ಭಕ್ತಿಯನ್ನು ಮೆಚ್ಚಿದ ಶಿವನು ತನ್ನ ಜಟಾಯುವಿನಲ್ಲಿನ ಗಂಗೆಯನ್ನು ಕಳುಹಿಸಿದರು ಶಿವನ ಆಜ್ಞೆಯನ್ನು ಮನ್ನಿಸಿ ಗಂಗೆಯು ಭಾಸ್ಕರ ಮಹಾರಾಜರು ತೋಡಿಸಿದ ಕುಂಡದಲ್ಲಿ ಪ್ರತ್ಯಕ್ಷಳಾದಳು. ಕೂಡಲೆ ಕುಂಡದಲ್ಲಿ ನೀರು ತುಂಬಿದವು. ಆಗಿನಿಂದ ಇಂದಿನವರೆಗೂ ಅದರಲ್ಲಿ ನೀರು ಕಡಿಮೆಯಾಗದೇ ಸಮಸ್ಥಾಯಿಯಲ್ಲಿದ್ದವು. ಆ ಸ್ಥಳಕ್ಕೆ ಹೋಗುವ ಭಕ್ತರೆಲ್ಲರಿಗೂ ಪುಣ್ಯಸಾಧಕವಾಗಿದೆ. ಭಾಸ್ಕರ ಮಹಾರಾಜರಿಂದ ನಿರ್ಮಿತವಾಗಿದ್ದ ಆ ಕುಂಡಕ್ಕೆ "ಸಿದ್ಧ ಕುಂಡ" ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಭಾಸ್ಕರ ಮಹಾರಾಜರು ಸಂಧ್ಯಾವಂದನೆಗಳನ್ನು ಮಾಡಿದ ನಂತರ ಪ್ರಭುಗಳನ್ನು ನಮಸ್ಕರಿಸಿದರು ಕಾವಮ್ಮ ತನ್ನ ಬಟ್ಟೆಯಲ್ಲಿನ ಫಲಗಳನ್ನು ತಂದು ಪ್ರಭುಗಳ ಮುಂದಿರಿಸಿ ಸ್ವೀಕರಿಸಲು ಪ್ರಾರ್ಥಿಸಿಕೊಂಡಳು. ಆಗ ಪ್ರಭುಗಳು ನಾನು ಹಸಿವಿನಿಂದ ಬಳಲುತ್ತಿರುವಾಗ ನೀನು ಫಲಗಳನ್ನು ಕೊಡಲು ನಿರಾಕರಿಸಿದೆ. ಈಗ ಹೇಗೆ ಸ್ವೀಕರಿಸಲಿ ಎಂದು ಹೇಳಿದರು. ಆಗ ಕಾವಮ್ಮಳಿಗೆ ಬಹಳ ಆಶ್ಚರ್ಯವಾಯ್ತು. ಪ್ರಭುಗಳಿಗೆ ನಾನೆಂದು ಫಲಗಳನ್ನು ಕೊಡಲು ನಿರಾಕರಿಸಿದ್ದೇನೆಂದು ಸಂಕಟಕೊಳಗಾದಳು ಪ್ರಭಗಳು ಆಕೆಯ ಕಳವಳವನ್ನು ಈ ರೀತಿಯಾಗಿ ದೂರ ಮಾಡಿದರು. ಭಾಸ್ಕರ ಮಹಾರಾಜರು ಹಸಿದಿದ್ದಾಗ ನೀನು ಫಲಗಳನ್ನು ನೀಡಲಿಲ್ಲ. ಆ ಸಂದರ್ಭದಲ್ಲಿ ಅದರ ಅವಶ್ಯಕತೆ ಅವರಿಗೆ ಬಹಳವಿತ್ತು. ಹಸಿದವರ ಹಸಿವೆಯನ್ನು ನಿವಾರಿಸುವದೇ ಮೊದಲ ಧರ್ಮವಾಗಿದೆ ಎಂದು ಹೇಳಿದರು. ಸಮಾಧಾನ ಚಿತ್ತರಾಗಿ ಪ್ರಭುಗಳು ಹೇಳಿದ ವೇದ ವಾಕ್ಯವು ಕಾವಮ್ಮಳ ಕಣ್ಣು ತೆರೆಸಿತು. ಅವಳು ತಕ್ಷಣವೇ ಪ್ರಭುಗಳ ಪಾದಗಳ ಮೇಲೆ ಬಿದ್ದು ನನ್ನನ್ನು ಕ್ಷಮಿಸಿ ಪ್ರಭು ಮತ್ತು ದಯಮಾಡಿ ಫಲಗಳನ್ನು ಸ್ವೀಕರಿಸಿರೆಂದು ಪ್ರಾರ್ಥಿಸಿಕೊಂಡಳು. ಕರುಣಾಮಯರಾದ ಪ್ರಭುಗಳು ಆಕೆಯ ನಿವೇದನೆಯನ್ನು ಮನ್ನಿಸಿ ಫಲಗಳನ್ನು ಭಾಸ್ಕರ್ ಮಹಾರಾಜರೊಂದಿಗೆ ಸ್ವೀಕರಿಸಿದರು. ಅದರಲ್ಲಿ ಶ್ರೇಷ್ಠವಾದ ಪ್ರಸಾದವನ್ನು ಕಾವಮ್ಮ ತೆಗೆದುಕೊಂಡಳು.

## ನಂದೀಶ್ವರದ ಅವತಾರ ನಲ್ಲಬಕ್ಕ

ಹೈದ್ರಾಬಾದ ಕರ್ನಾಟಕದಲ್ಲಿ ಬರುವ ಪ್ರಮುಖ ಜಿಲ್ಲಾ ಕೇಂದ್ರವಾದ ಗುಲಬರ್ಗಾದ ಸಮೀಪದಲ್ಲಿ ಚಿಂಚೋಳ್ಳಿ ಎಂಬ ಪಟ್ಟಣವು ಹಲವು ಕಾರಣಗಳಿಂದ ಪ್ರಸಿದ್ಧಿ ಪಡೆದುದ್ದಾಗಿದೆ. ಆ ಸ್ಥಳದಲ್ಲಿ ಒಬ್ಬ ಶೈವ ಮಠಾಧೀಶರು ನೆಲೆಸಿದ್ದರು. ಅವರು ಶಿವಭಕ್ತರು ಜಂಗಮರೂ ಆಗಿದ್ದರು. ಇವರು ಕರಕನಳ್ಳಿಯ ಬಕ್ಕಪ್ರಭುಗಳನ್ನು ತಮ್ಮ ಜಂಗಮಾರ್ಚನೆಗೆ ಆಹ್ವಾನಿಸಿ ಧನ್ಯರಾಗಬೇಕೆಂದು ಬಯಸಿದರು. ಈ ಹಿನ್ನಲೆಯಲ್ಲಿ ತಮ್ಮ ನಾಲ್ಕು ಜನ ಆಪ್ತ ಶಿಷ್ಯರನ್ನು ಪ್ರಭುಗಳಲ್ಲಿಗೆ ಕಳುಹಿಸಿದರು. ಆ ಶಿಷ್ಯರು ಕರಕನಳ್ಳಿಯ ಬಕ್ಕ ಪ್ರಭುಗಳಲ್ಲಿಗೆ ಹೋಗಿ ಅವರ ದರಶನ ಪಡೆದು ತಾವು ಬಂದ ವಿಚಾರ ಪ್ರಭುವಿಗೆ ತಿಳಿಸಿದರು. ಈ ವೇಳೆಗಾಗಲೇ ಬೋಜನದ ಸಮಯವಾಗಿತ್ತು ಪ್ರಭುಗಳು ಆ ನಾಲ್ಕು ಜನ ಶಿಷ್ಯರನ್ನು ಕುರಿತು ಪ್ರಸಾದ ಸಿದ್ಧವಾಗಿದೆ. ಸಂದೇಶ ಅತೀವ ಆನಂದವನ್ನುಂಟು ಮಾಡಿತ್ತು. ಅವರು ನಲ್ಲ ಬಕ್ಕನನ್ನು ಆಧರಿಸಿ ತಮ್ಮ ಶಿಷ್ಯರಿಗೆ ತಲುಪಬೇಕಾದ ಭಸ್ಮದ ಉಂಡೆಗಳನ್ನು ಮುಂದಿಟ್ಟರು. ನಲ್ಲಬಕ್ಕ ಆ ಭಸ್ಮದ ಉಂಡೆಗಳನ್ನು ನುಂಗಿ ತನ್ನ ಗರ್ಭದಲ್ಲಿ ಸುರಕ್ಷಿತವಾಗಿಟ್ಟು ಕರಕನಳ್ಳಿ ಮತ್ತು ಚಿಂಚೋಳ್ಳಿಯ ಹದಿನೈದು ಕೀ. ಮೀ. ದೂರವನ್ನು ಕೇವಲ ಎರಡು ಗಂಟೆಯಲ್ಲಿ ನಲ್ಲಬಕ್ಕ ಹೋಗಿ ಬಂದಿತ್ತು.

ನಲ್ಲಬಕ್ಕ ಬರುವಷ್ಟರಲ್ಲಿಯೇ ಶಿಷ್ಯರೆಲ್ಲರೂ ಸ್ನಾನ ಮಾಡಿ ಶುಚಿಯಾಗಿದ್ದರು. ನಲ್ಲಬಕ್ಕ ತಮ್ಮ ನಿಷ್ಠೆಯದ್ಯೂತಕವಾದ ಭಸ್ಮವನ್ನು ಇಷ್ಟೊಂದು ಶ್ರೀಪ್ರಗತಿಯಲ್ಲಿ ತಂದಿದ್ದಕ್ಕೆ ಅವರಿಗೆ ಅತೀವ ಆನಂದವೂ, ಆಶ್ಚರ್ಯವು ಏಕಕಾಲಕ್ಕೆ ಉಂಟಾದವು. ಅವರು ಬಂದು ನಲ್ಲಬಕ್ಕನ ಮುಂದೆ ಬಿಳಿಯ ಬಟ್ಟೆಯನ್ನು ಹಾಸಿದರು. ನಲ್ಲಬಕ್ಕ ತಾನು ತಂದ ಭಸ್ಮವನ್ನು ಅದರ ಮೇಲೆ ಕಕ್ಕಿತ್ತು. ಪ್ರಭುಗಳಾದಿಯಾಗಿ ಎಲ್ಲರಿಗೂ ಹೇಳತ್ತೀರಲು ಆನಂದವುಂಟಾಯಿತು. ಆ ಶಿಷ್ಯರು ಹರುಷದಿಂದಲೆ ಭಸ್ಮವನ್ನು ತೆಗೆದುಕೊಂಡು ತಮ್ಮ ಪೂಜಾ ವಿಧಿಯನ್ನು ಪೂರೈಸಿ ಪ್ರಭುಗಳೊಂಧಿಗೆ ಪ್ರಸಾದ ಸ್ವೀಕರಿಸಿ ಧನ್ಯರಾದರು. ಈ ಸನ್ನಿವೇಶವನ್ನು ಕಣ್ಣಾರೆ ಕಂಡ ಜನತೆ ಪ್ರಭುಗಳನ್ನು ಶಿವನ ಅವತಾರವೆಂದು ನಲ್ಲಬಕ್ಕನು ನಂದಿ ಸ್ವರೂಪವೆಂದು ಭಾವಿಸಿ ಪೂಜಿಸತೊಡಗಿದರು. ಹೀಗೆ ನಲ್ಲಬಕ್ಕನು ಪ್ರಭುಗಳ ಸೇವೆಯನ್ನು ಶೃದ್ಧಾ ಭಕ್ತಿಯಿಂದ ಮಾಡುತ್ತ ಜನರ ಗೌರವಾದರಗಳಿಗೆ ಭಾಜನವಾಗಿತ್ತು.

ನಮ್ಮೊಂದಿಗೆ ಪ್ರಸಾದ ಸ್ವೀಕರಿಸಬೇಕೆಂದರು ಆ ಶಿಷ್ಯರೆಲ್ಲರೂ ಪ್ರಭುಗಳೊಂದಿಗೆ ಪ್ರಸಾದ ಸ್ವೀಕರಿಸುವುದು ಒಂದು ಸುದೈವವೆಂದೆ ಭಾವಿಸಿದ್ದರು. ಆದರೆ ಅವರು ತಮ್ಮೊಂದಿಗೆ ವಿಭೂತಿಯನ್ನು ತೆಗೆದುಕೊಂಡು ಬಂದಿರಲ್ಲಿಲ್ಲ. ಮತ್ತು ಆ ವಿಭೂತಿ ಭಸ್ಮ ಇಲ್ಲದೇ ಅವರು ಪ್ರಸಾದ ಸ್ವೀಕರಿಸುವಂತಿರಲಿಲ್ಲ. ಈ ವಿಷಯವನ್ನು ವಿಧಿಯಿಲ್ಲದೆ ಅವರು ಪ್ರಭುಗಳಿಗೆ ತಿಳಿಸಿದರು. ಮತ್ತು ಚಿಂಚೋಳಿಗೆ ಹೊರಡಲು ಅನುಮತಿ ಬೇಡಿದರು. ಪ್ರಭುಗಳು ಅವರ ನಿಷ್ಠೆಯನ್ನು ಮನಸಾರೆ ಮೆಚ್ಚಿ ಅದು ಇರುವ ಸ್ಥಳವನ್ನು ಹೇಳಿದರೆ ಅದನ್ನು ನಲ್ಲ ಬಕ್ಕನಿಂದ ತರಿಸುತ್ತೇನೆ ಎಂದರು. ನಲ್ಲಬಕ್ಕ ಪ್ರಸಾದ ತೆಗೆದುಕೊಂಡು ಬಂದ ನಂತರವೇ ಎಲ್ಲರೂ ಕೂಡಿ ಪ್ರಸಾದ ಸ್ವೀಕರಿಸಬಹುದೆಂದರು.

ನಲ್ಲಬಕ್ಕ ಪ್ರಭಗಳ ಒಬ್ಬ ವಿಶಿಷ್ಟ ಶಿಷ್ಯತಮನಾಗಿದ್ದ ಅವನೆಂದರೆ ಪ್ರಭುಗಳಿಗೆ ಅಚ್ಚು ಮೆಚ್ಚು ಸೂಚಿಸಿದ ಕೆಲಸವನ್ನು ಶ್ರದ್ಧೆಯಿಂದ ಮಾಡುವ ನಲ್ಲಬಕ್ಕ ಬಹುಜನರ ಗೌರವಾದರಗಳಿಗೆ ಪಾತ್ರನಾಗಿದ್ದನು ಹೀಗೆ ಅಪಾರ ಜನ ಮೆಚ್ಚುಗೆ ಪಡೆದ ನಲ್ಲಬಕ್ಕ ಬೇರಾರೂ ಅಲ್ಲ ಅದು ಒಂದು ಎತ್ತು ಎನ್ನುವರು. ಇಲ್ಲಿನ ವಿಶೇಷ ಪ್ರಭುಗಳು ಚಿಂಚೋಳ್ಳಿ ಮಠಾಧೀಶರಿಗೆ ಭಸ್ಮದ ವಿಷಯವಾಗಿ ಓಲೆಯೊಂದನ್ನು ಬರೆದು ನಲ್ಲಬಕ್ಕನ ಕೊರಳ ಪಟ್ಟಿಗೆಯಲ್ಲಿಟ್ಟರು ನಲಬಕ್ಕ ಚಿಂಚೋಳ್ಳಿಗೆ ಪ್ರಯಾಣ ಬೆಳೆಸಿದ. ನಲ್ಲಬಕ್ಕನ ನಡಿಗೆಯ ವೇಗಕ್ಕೆ ಚಿಂಚೋಳ್ಳಿ ಬಹು ಬೇಗ ಬಂದಿತು. ಮಠಾಧೀಶರಿಗೆ ನಲ್ಲ ಬಕ್ಕನ ಆಗಮನ ಮತ್ತು ಪ್ರಭುಗಳ ಸಂದೇಶ ತಲುಪಿತ್ತು.

ಹೈದ್ರಾಬಾದ ನಿಜಾಮ ನಾಸಿರ ದೌಲನಿಗೆ  ಅನುಗ್ರಹ ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ಸುಪ್ರಸಿದ್ಧ ಸಂಸ್ಥಾನಗಳಲ್ಲಿ ಹೈದ್ರಾಬಾದ ಮುಂಚೂಣಿಯಲ್ಲಿತ್ತು ಅಲ್ಲಿ ನಿಜಾಮ ವಂಶಸ್ಥರ ಆಡಳಿತವಿತ್ತು. ಆ ವಂಶದ ನಾಸಿರು–ಉದ್–ದೌಲ್ ಒಬ್ಬ ಸುಪ್ರಸಿದ್ಧ ನಿಜಾಮನಾಗಿರುವಂತೆ ಸಜ್ಜನನು
ಸಾತ್ವಿಕ ಮನೋಭಾವದವನು. ಆಗಿದ್ದನು. ಆತನ ಆ ಸ್ಥಾನದಲ್ಲಿ ಚಂದುಲಾಲ ಎಂಬುವನು ಮಹಾ ಮಂತ್ರಿಯಾಗಿದ್ದನು.

ಆತ ಕೇವಲ ಮಹಾಮಂತ್ರಿಯಾಗಿರದೆ ಬಹುದೊಡ್ಡ ಪಂಡಿತನು ಆಗಿದ್ದನ್ನು. ಅವನ ಸ್ವಭಾವ ಬಹು ಉದಾತ್ತವಾಗಿತ್ತು ಅವನು ಬಡ ಕುಟುಂಬದ ಹಿನ್ನೆಲೆಯಲ್ಲಿ ಬೆಳೆದು ಬಂದವನಾಗಿದ್ದನು ಬಾಲ್ಯಾವಸ್ಥೆಯಲ್ಲಿಯ ಕುಟುಂಬ ನಿರ್ವಹಣೆಯ ಹೊರೆಯನ್ನು ಹೊರಬೇಕಾಯಿತು ಹೀಗಾಗಿ ಅವನು ಚಿಕ್ಕಂದಿನಿಂದಲೆ ಶ್ರಮವಹಿಸಿ ಹೈದರಾಬಾದ ರಾಜ್ಯದ ಮಹಾಮಂತ್ರಿಯಾದುಕ್ಕೆ ಒಂದು ರೋಚಕ ಹಿನ್ನಲೆ ಇದೆ.

ಒಂದು ದಿನ ಚಂದುಲಾಲ ಮೂಟೆಗಳನ್ನು ಹೊರುವ ಕೆಲಸಕ್ಕೆ ಹೋಗುತ್ತಿದ್ದನು ದಾರಿ ಮಧ್ಯದಲ್ಲಿ ಅದೃಷ್ಟವಶಾಂತ ಅವನಿಗೆ ಅಂತಾಪುರ ಗ್ರಾಮದ ಕಾಶಿನಾಥ ಮಹಾರಾಜರ ದರ್ಶನವಾಯಿತು. ಸಿದ್ಧ ಪುರುಷರೂ ಮಹಾರಾಜರು ಬಕ್ಕ ಪ್ರಭುಗಳಿಗೆ ಆಪ್ತರಾಗಿದ್ದರು ಇವರ ದರ್ಶನ ಚಂದುಲಾಲ ಪುಣ್ಯದ ಫಲವೆಂದು ತಿಳಿದು ಅವರ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡ ಚಂದುಲಾಲನ ಅದ್ಯ ಭಕ್ತಾದಿಗಳಿಗೆ ಮಹರಾಜನ ಮನಸ್ಸು ಪ್ರಸನ್ನಗೊಂಡಿತು ಉಚ್ಚ ಕೋಟಿ ಜೀವನವನ್ನು ಅವನಿಗೆ ಪ್ರಸಾದವಿರಿಸಲು ಸಂಕಲ್ಪಿಸಿದರು. ಚಂದುಲಾಲ ಎಂದಿನಂತೆ ಮಹಾರಾಜರ ಸೇವೆಯಲ್ಲಿ ಮಗ್ನನಾಗಿದ್ದನು ಆಗ ಮಹಾರಾಜರು ಅವನನ್ನು ಆತ್ಮೀಯವಾಗಿ ಕರೆದು ಹೀಗೆ ಆರ್ಶಿವದಿಸಿದರು, "ನನ್ನ ಆರ್ಶಿವಾದ" ಫಲದಿಂದ ನಿನಗೆ ಅದೃಷ್ಟ ಉಂಟಾಗುತ್ತದೆ. ಕೆಲದಿನಗಳಲ್ಲಿ ನೀನು ಹೈದಾರಾಬಾದಿನ ರಾಜ್ಯದ ಮಹೋನ್ನತಿ ಸ್ಥಾನವಾದ ಮಂತ್ರಿಸ್ಥಾನ ಅಲಂಕರಿಸುವಿ ಇದು ಬೆಳಕಿನಷ್ಟು ಸತ್ಯ ಎಂಟು ಆರ್ಶಿವದಿಸಿದರು, ಅವರ ಆರ್ಶಿವಾದ ಪಡೆದು ಹೈದಬಾದಿಗೆ ಪ್ರಯಾಣ ಬೆಳೆಸಿದ. ಹೈದರಬಾದ  ಐತಿಹಾಸಿಕ ಮಹತ್ವವುಳ್ಳ ಒಂದು ಸುಂದರ ನಗರ ಅಲ್ಲಿ ನಾಸಿರ್–ಉದ್–ದೌಲ  ಎಂಬ ನಿಜಾಮ ಆಡಳಿತ ಮಾಡುತ್ತಿದ್ದನು. ಅಲ್ಲಿ ನಿಜಾಮ ಜನರ ಸುಖಃ ದುಖಃ ಅರಿಸಲು ವಿಚಾರಿಸಲು ಹೊರಟ್ಟಿದ್ದನು ಜನಸಾಗರದ ಮಧ್ಯದಲ್ಲಿ ನಿಜಾಮನ ದೃಷ್ಟಿ ಚಂದುಲಾಲನ ಮೇಲೆ ಬಿತ್ತು ಮೊದಲ ನೋಟದಲ್ಲಿಯೋ ಚಂದುಲಾಲನ ದೈವಾನುಗ್ರಹದ  ಮನದಟ್ಟಾಯಿತು, ತಕ್ಷಣ ಅವನ ಹಿನ್ನಲೆ ವಿಚಾರಿಸಿ, ಅರಮನೆಗೆ ಕರೆದುಕೊಂಡು ಹೋದನು.  ಚಂದುಲಾಲನನ್ನು ಪರೀಕ್ಷಿಸಲು ಸಭಾ ಮಂಟಪಕ್ಕೆ ಬಂದಿದ್ದನು. ಸತ್ವ ಪರೀಕ್ಷೆ ನೋಡಲು ಸಭಿಕರೆಲ್ಲರು ನೆರೆದಿದ್ದರು ನಿಜಾಮ ತನ್ನ ಬಲ ಮುಷ್ಠಿಯಲ್ಲೇ ಐದು ಸ್ವರ್ಣದ ನಾಣ್ಯಗಳನ್ನು ಹಿಡಿದು ನನ್ನ ಮಷ್ಠಿಯಲ್ಲಿ ಏನಿದೆ ? ಎಂದು ಕೇಳಿದನು ನೀನು ಈ ಪ್ರಶ್ನೆಗೆ  ಸರಿಯಾದ ಉತ್ತರ ನೀಡಿದರೆ ನಿನ್ನನ್ನು ಈ ನಾಡಿನ ಪ್ರಧಾನಿಯಾಗಿ ಮಾಡುತ್ತೇವೆ. ಎಂದನು. ತಕ್ಷಣ ಚಂದುಲಾಲನು ಮಹಾರಾಜರ ಅನುಗ್ರಹದಿಂದ ದೈವ ಭಾಷೆಯಲ್ಲಿ ನಿಜಾಮನಿಗೆ ನೀವು ಪ್ರಜಾಪಾಲಕರು ಈಶ್ವರ ಸಂಭೂತರು (ಈಶ್ವರನ ಆದ್ರಿನದಲ್ಲಿ) ಸೃಷ್ಟಿಗೆ ಉಪಧಾನ ಕಾರಣವಾದ ಪಂಚ ಭೂತಗಳು  ನೆಲೆಸಿರುತ್ತವೆ, ಹೀಗಾಗಿ ನಿಮ್ಮ ಮುಟ್ಟಿಯಲ್ಲಿ. ಪಂಚಭೂತದ ಪಂಚ ಮುದ್ರಗಳಿವೆ ಎಂದರು    ಚಂದುಲಾಲನ ಉತ್ತರದಿಂದ ನಿಜಾಮ ಪ್ರಸನ್ನನಾಗಿ ಅವನಿಗೆ ರಾಜ ಮರ್ಯಾದೆಯನ್ನು ನೀಡಿ, ಸತ್ಕರಿಸಿ, ಪ್ರಧಾನಿಹುದ್ದೆ ದಯಪಾಲಿಸಿದನು ಪ್ರಧಾನಿಯಾದ ಮೇಲೆ ಚಂದುಲಾಲ ಹಲವಾರು ಆಡಳಿತಾತ್ಮಕ ಸುಧಾರಣೆ ಜಾರಿಗೆ ತಂದನು ಪ್ರಜೆಗಳ ಕಲ್ಯಾಣ "ಪ್ರಜಾ ಸೇವೆ ಈಶ್ವರನ ಸೇವೆ" ಎಂಥು ತಿಳಿದು ನಿಷ್ಠೆಯಿಂದ ಆಡಳಿತ ನಡೆಸಿ ಆ ನಾಡಿನಲ್ಲಿ ಪ್ರಸಿದ್ಧನಾದನು.

ನಾಸಿರ ದೌಲನು ಒಬ್ಬ ಸಾತ್ವಿಕ ಸ್ವಭಾವದ ಅರಸನಾಗಿದ್ದನು ಆತನು ನ್ಯಾಯಪರವೂ ಧರ್ಮಪರವೂ ಮತ್ತು ನೀತಿಯುತವು ಆಗಿರುತ್ತಿತ್ತು.

ಇಂತಹ ಸರಳ ಗುಣದವನಾಗೆದಸ್ನು. ನಿಜಾಮನ ಆರೋಗ್ಯ ಹದಗೆಡಲಾರಂಭಿಸಿತು ಇದು ಚಿಂತಾಕ್ರಾಂತವಾದ ವಿಷಯವಾಗಿ ಪರಿಣಮಿಸಿತು ಹಲವಾರು ಕಡೆಯಿಂದ ವಿಶೇಷ ತಜ್ಞ ವೈದ್ಯರುಗಳಿಂದ ಉಪಚಾರ ಮಾಡಿದರು. ಯಾವುದೇ ಸುಧಾರಣೆ ಕಂಡು ಬರಲಿಲ್ಲ, ಧಾನ – ಧರ್ಮ ಮಾಡಿದರೂ ಆರೋಗ್ಯ ಸುಧಾರಿಸುವ ಲಕ್ಷಣ ಕಾಣಲಿಲ್ಲ.

ನಿಜಾಮನಿಗೆ ಕರಕ್ಕನಳ್ಳಿಯ ಬಕ್ಕ ಪ್ರಭುಗಳ ಮಹಿಮೇ ಈ ಮೋದಲೆ ತಿಳಿದಿತ್ತು ಪ್ರಧಾನಿ ಚಂದುಲಾಲನೊಂದಿಗೆ ಅವರು ದರ್ಶನ ಪಡೆಯಬೇಕೆಂದನು ಚಂದುಲಾಲನು ನಮ್ಮ ಗುರುಗಳಾದ ಕಾಶಿನಾಥ ಮಹಾರಾಜರವರಿಗೂ ತುಂಬ ಆತ್ಮಿಯ ನಮ್ಮ ಗುರುಗಳಿಗೆ ವಿದಿವೃತಾಂತ ತಿಳಿಸಿ, ಅವರ ಮಧ್ಯಸ್ಥಿ ಕೆಯಿಂದ ಬಕ್ಕ ಪ್ರಭುಗಳಿಗೆ ತಿಳಿಸಿದರೆ ಕಾರ್ಯ ಫಲಿಸುವುದು ಎಂದನು.

ಚಂದುಲಾಲನು ಕಾಶಿನಾಥ ಮಹಾರಾಜರಲ್ಲಿ ಪ್ರಾರ್ಥನೆಪರಿಯಾಗಿ ಪ್ರಾರ್ಥಿಸಿ, ಉಪಕರಿಸಬೇಕೆಂದನು ಅದಕ್ಕೆ ಮಹಾರಾಜರು ನಾನು ಸ್ವತಃ ಬಕ್ಕ ಪ್ರಭುಗಳಲ್ಲಿಗೆ ಹೋಗಿ ನಿಜಾಮನ ಸಂಸ್ಥಾನದ ನಾಸಿರುದೌಲನಿಗೆ ರೋಗ ನಿವಾರಣೆಗೆ ಪ್ರಾರ್ಥಿಸುತ್ತೇನೆಂದು, ಆಶ್ವಾಸನೆ ನೀಡಿದರು. ನಂತರ ಕಾಶಿನಾಥ ಮಹಾರಾಜರು ಗೊಟಂ ಗೊಟ್ಟೆಯನ್ನು ತಲುಪಿದರು. ಅಲ್ಲಿ ಬಕ್ಕ ಪ್ರಭುಗಳನ್ನು ಕಂಡು ಬಹು ಹರುಷಗೂಂಡರು ಪ್ರಭುಗಳು ಸಹ ತುಂಬಾ ಲವಲವಿಕೆಯಿಂದಿದ್ದರು. ತಾನು ಹೊತ್ತು ತಂದ ಸುದ್ಧಿ ಸಂದೇಶ ತಿಳಿಸಲು ಇದೇ ಸೂಕ್ತ ಸಮಯ ಎಂದು ತಿಳಿದು ಆ ತವಕದ ಧ್ವನಿಯಯಲ್ಲೆ ಹೈದ್ರಾಬಾದ ನಿಜಾಮನ ವ್ಯಾದಿ ವೃತ್ತಾಂತವನ್ನು ಪಭುಗಳಿಗೆ ತಿಳಿಸಿದರು. ರೋಗ ಪಿಡಿತ ನಿಜಾಮ ಸದಾಕಾಲ ಪ್ರಜೆಗಳ ಪ್ರಮಾಣಿಕ ಸೇವೆ ಮಾಡುವ ಅಪರೋಪದ ಪ್ರಜಾ ಪಾಲಕನ್ನಾಗಿದ್ದಾನೆ ಆದುದರಿಂದ ದಯಮಾಡಿ ತಾವು ಹೈದ್ರಾಬಾದಿಗೆ ತರಳಿ ನಿಜಾಮನಿಗೆ ಚಿಕಿತ್ಸೆ ನೀಡಿ ಉಪಕರಿಸಬೇಕು ತಮ್ಮ ಕೈಗುಣಕ್ಕೆ ಭಯಂಕರ ರೋಗಗಳು ಕ್ಷಣ ಮಾತ್ರದಲ್ಲಿ ಉಪಶಮನ ಮಾಡವ ದೈವಿಶಕ್ತಿಯಿದೆ ಎಂದು ನಂಬಿ, ನಾನು ನಿಮ್ಮಲ್ಲಿಗೆ ಬಂದಿದ್ದೇನೆ. ನನ್ನ ಮನವಿ ಮನ್ನಿಸಿ ತಾವು ಹೈದ್ರಾಬಾದಿಗೆ ಪ್ರಯಾಣ ಬೆಳೆಸಬೇಕೆಂದು ಕೇಳಿಕೊಂಡರು ಅದಕ್ಕೆ ಪ್ರಭುಗಳು ನಿಜಾಮನ ಆನಾರೋಗ್ಯ ಆತನ ಧರ್ಮಾಡಳಿತಕ್ಕೆ ಕಳಸಪ್ರಾಯವಾಗಿದೆ. ಅದನ್ನು ನಿವಾರಿಸಬೇಕೆಂದು ದೃಢ ಸಂಕಲ್ಪ ಮಾಡಿದರು ನಾವು ಹೈದ್ರಾಬಾದಿಗೆ ಬಂದು ಚಿಕಿತ್ಸೆ ನೀಡುತ್ತೇವೆ. ಎಂದು ಪ್ರಭುಗಳ ಬಾಯಿಂದ ಹೊರ ಬಂದಿತು. ಈ ಸಂದೇಶ ಕಾಶಿನಾಥ ಮಾಹಾ ರಾಜರು ಹೈದ್ರಾಬಾದಿಗೆ ತಿಳಿಸಿದರು ಪ್ರಭುಗಳ ಆಗಮನದ ಸುದ್ದಿ ತಿಳಿದು ನಿಜಾಮನ ಪ್ರಧಾನಿ ಪ್ರಭುಗಳ ಮಾರ್ಗ ಮಧ್ಯಕ್ಕೂ ಸಕಲ ಸಿದ್ಧತೆಗಳನ್ನು ಶ್ರದ್ಧೆ-ಭಕ್ತಿಯಿಂದ ಮಾಡಿದನು. ನಿಜಾಮ ಮತ್ತು ಮಹಾಮಂತ್ರಿ ಆಡಳಿತ ನೈ ಪುಣ್ಯತೆಯನ್ನು ಮನಸಾರೆ ಮೆಚ್ಚಿ ಹೈದಾಬಾದಿಗೆ ವಿಳಂಬ ವಿಲ್ಲದೇ ತಲುಪಿದರು.

ಪಟ್ಟಣದ ಮಹಾದ್ವಾರದಲ್ಲಿ ಅಡ್ಡ ಪಲ್ಲಕ್ಕಿಯೊಂದಿಗೆ ಚಂದುಲಾಲ ಆತ್ಮೀಯ ಸ್ವಾಗತ ನೀಡಿದನು. ನಿಜಾಮನ ಸಹ ಪರಿವಾರದ ಸೇವೆ ಪ್ರಭುಗಳಿಗೆ ಮಹದಾನಂದವುಂಟು ಮಾಡಿತು. ಮರುದಿನ ಪ್ರಭುಗಳ ನಿಜಾಮನ ಅರಮನೆಗೆ ಪ್ರಧಾನಿ ಯೋಂದಿಗೆ ಬಂದರು ಅಲ್ಲಿ ನಿಜಾಮ್ ನಾಸಿರ್ – ಉ– ದೌಲ್ ರೋಗಶ್ಯಯ ಮೇಲೆ ನಿಸ್ತೋಜವಾಗಿ ಮಲಗಿದ್ದನು ಅವನ ದೇಹ ನಿದ್ರಾಹೀನತೆಯಿಂದ ತುಂಬಾ ಕೃಷಿಯಾಗಿ ಹೋಗಿತು. ಕಣ್ಣುಗಳಲ್ಲಿನ ಆಮೋದಲಿನ ಕಾಂತಿ ಮಾಯವಾಗಿತ್ತು ರೋಗ ಶಯ್ಯೆಯಿಂದಲೆ ತೀರಾ ಕ್ಷೀಣ ಧ್ವನಿಯಲ್ಲಿ ಮಾತನಾಡಲು ಪ್ರಯತ್ನಿಸುತ್ತಿದ್ದನು ಈ ಅನ್ಯಾರೋಗ್ಯದ ಪರಿಸ್ಥಿತಿಯಲ್ಲಿಯೂ ನಿಜಾಮನು ತನ್ನ ಪ್ರಭುಗಳನ್ನು ವಿನಮ್ರವಾಗಿ ನಮಸ್ಕರಿಸಿದನು. ಕುಶಲೋಪಚಾರಿಸಿದನು. ಔಪಚಾರಿಕ ಮಾತುಗಳಾದ ಮೇಲೆ ನಿಜಾಮನ ಅನಾರೋಗ್ಯದ ವೃತ್ತಾಂತವನ್ನು ತಿಳಿಸಿದನು ನಾಡಿನ ಸುಪ್ರಸಿದ್ಧ ವೈದ್ಯರು ಬಂದಿದ್ದರು ನನ್ನ ರೋಗ ಕಿಂಚಿತ್ತು ಉಪಶಮನಗೊಳ್ಳಲಿಲ್ಲ. ಅನಿವಾರ್ಯವಾಗಿ ತಮ್ಮನ್ನು ಅಷ್ಟುದೂರದಿಂದ ಕರೆಯಸಕೊಳ್ಳಬೇಕಾಯಿತು ದಯವಿಟ್ಟು ನನ್ನನ್ನು ಕ್ಷಮಿಸಬೇಕು.

ಬಕ್ಕ ಪ್ರಭುಗಳು ಕ್ಷಣ ಕಾಲ ಧ್ಯಾನಿಸಿ ನಿಜಾಮನಿಗೆ ದೇಹಾರೋಗ್ಯ ಭವ ರೋಗ ವಿಮುಕ್ತಿ ಪ್ರತಿಪಾದಿಸಿದರು, ನಿಜಾಮನ ಸರ್ವಾಂಗಗಳು ಚೇತನ ಗೊಂಡವು, ಮೈ ಮನಸ್ಸುಗಳು ವಿಲ್ಲಾಸಿತಗೊಂಡು ನಿಜಾಮನು ರೋಗ ಮುಕ್ತನಾದನು ಈ ಪವಾಡದಿಂದ ಪ್ರಭುಗಳ ದಿವ್ಯಶಕ್ತಿ ಕಂಡು ಮನದಲ್ಲಿ ವಂದಿಸಿದನು.

ನಿಜಾಮನಿಗೆ ಹೊಸ ಜೀವ ಬಂದು ಮರುಜನ್ಮ ಪಡೆದಂತಾಯಿತು. ಪ್ರಭುಗಳಿಗೆ ಜಾಹಗೀರು ದಾನ ಮಾಡಲು ಬಂದಾಗ ನಮಗೆ ಬೇಡ ಎಂದರು ಅವರ (ಫಲಾಪೇಕ್ಷರಹಿತವಾದ) ಮಾತಿಗೆ ಅರಸದ ಪರಿವಾರ ತಲೆಬಾಗಿತು.

ಚಂದುಲಾಲನು ಬೋಜನಕ್ಕಾಗಿ ಪ್ರಭುಗಳ ಬೋಜನದ ವ್ಯವಸ್ಥೆ ರಾಜಧಾನಿ ಶಿವಭಕ್ತರ ಮನೆಯಲ್ಲಿ ಏರ್ಪಡಿಸಿದನ್ನು ಅದನ್ನು ತಿಳಿದ ಪ್ರಭುಗಳು ನಮ್ಮ ಭೋಜನಕ್ಕಾಗಿ ವಿಶೇಷ ಉಪಚಾರ ಬೇಡ ನಮಗೆ ಪಕ್ವಾನ್ನಕ್ಕಿಂತ ಭೀಕ್ಷವೆಂಬುವದು ಪ್ರಿಯವಾದದು ಭಕ್ತರು ನೀಡಿದ ಭೀಕ್ಷಯ ನಮಗೆ ಸಂತೃಪ್ತಿ ಪಡಿಸುವದು ನಮ್ಮ ಧರ್ಮ ಇದರಿಂದಲೆ, ನಮ್ಮ ಜೀವನ ನಡೆಸುತ್ತವೆ. ಈಗ ನಾವು ಬಂದ ಕಾರ್ಯ ಸಿದ್ಧಿಸಿದೆ ತಾವು ಅನುಮತಿ ನೀಡಿದರೆ, ಗೊಂಟ್ಟಂ ಗೊಟ್ಟಿಗೆ ಮರಳುತ್ತೇವೆ, ನಿಮಗೆಲ್ಲರಿಗೂ ಮಂಗಳವಾಗಲಿ ಎಂದು ಆರ್ಶರ್ವದಿಸಿದರು.

**ಕಾಯದ ಹಂಗು ಹರಿದ ಪ್ರಭುಗಳು**

ಒಂದು ದಿನ ನಿತ್ಯ ಪೂಜಾ ಕಾರ್ಯ ಪೂರ್ತಿ ಮಾಡಿ ನಲ್ಲ ಬಕ್ಕನನ್ನು ತಮ್ಮ ಬಳಿ ಕರೆದು 'ಇನ್ನು ನಮಗೆ ಶರೀರವನ್ನು ಬಿಟ್ಟು ಹೋಗುವ ಸಮಯ ಹತ್ತಿರ ಬಂದಿದೆ. ನಿನಗೆ ನಾನು ಅಪ್ಪಣೆ ನೀಡುತ್ತೇನೆ. ನಿನ್ನ ನೀಜರೂಪದಲ್ಲಿ ಕೈಲಾಸಕ್ಕೆ ಮರಳಬಹುದು ಎಂದಾಗ ನಲಬಕ್ಕ ಅವರ ಆದೇಶ ಪರಿಪಾಲಿಸಿತು.

ಒಂದು ದಿನ ಪ್ರಭುವು ಭಕ್ತರೊಂದಿಗೆ ಅಧ್ಯಾತ್ಮಿಕ ಆನಂದದಲ್ಲಿ ತೆಲಾಡುತ್ತಿರುವಾಗ ಹೀಗೆ ಹೇಳಿದರು. "ಈ ಜನ್ಮದಲ್ಲಿ ನನ್ನ ಕಾರ್ಯ ಪೂರ್ಣವಾಯ್ತು. ಬೇಗನೆ ಈ ದೇಹ ಪರಿತ್ಯಜಿಸಿ ಪರಲೋಕಕ್ಕೆ ಹೋಗಿ ಸೇರಿಕೊಳ್ಳುತ್ತೇನೆ. ನಿವು ನನ್ನ ಜೊತೆಯಲ್ಲಿದ್ದು ಯಾವ ಮಾರ್ಗದಲ್ಲಿ ಸಾಗಿರುವರೂ ಅದೇ ದಾರಿಯಲ್ಲಿ ಮುಕ್ತಿ ಪಡೆಯಿರಿ" ಎಂದು ಉಪದೇಶ ನೀಡಿದರು.

ಪ್ರಭು ತಮ್ಮ ಸಮಾದಿಗೆ ಮುಹರ್ತವನು ನಿಶ್ಚಯಿಸಿದರು ಸರಿಯಾಗಿ ಮಾಘ ತ್ರೈಯೋದಶಿಯೆಂದು ಈ ವಿಷಯ ಎಲ್ಲ ಭಕ್ತರೆದುರಿಗೆ ತಿಳಿಸಲು ಪ್ರಭು ಇಚ್ಚಿಸದೇ ರಹಸ್ಯವಾಗಿ ಕೆಲವು ಶಿಷ್ಯರಿಗೆ ತಿಳಿಸಿ ಸಮಾದಿ ನಿರ್ಮಾಣ ಕಾರ್ಯಕ್ಕೆ ಆಶಿರ್ವಾದಿಸಿದರು ಭಕ್ತರಿಗೆ ಭವಿಷ್ಯತಿನಲ್ಲಿ ತಾವು ಮತ್ತೊಂದು ರೂಪದಲ್ಲಿ ಬಂದು ನಿಮ್ಮಗೆ ದರ್ಶನ ನೀಡುತ್ತೇನೆ. ಆ ಸ್ಥಳವು ಪುಣ್ಯ ಕ್ಷೇತ್ರವಾಗುವುದು ಪ್ರಭುವಿನ ಆದೇಶದಂತೆ ಸಮಾಧಿ ನಿರ್ಮಾಣ ಪೂರ್ಣಗೊಂಡಿತ್ತು ಪ್ರಭುಗಳು ಮಾಘ ಬಹಳ ತ್ರಯೋದಶಿಯೆಂದು ಪ್ರಭುವು ಸಮಾಧಿಯಲ್ಲಿ ಪದ್ಮಾಸನದೊಂದಿಗೆ ಕುಳಿತರು, ಇದನ್ನು ತಿಳಿದ ಮಡದಿ ಗಿರಿಜಾಮಾಯಿ ತತ್ತರಿಸಿ ರೋಧಿಸುತ್ತ ಪ್ರಭುವಿನ ಮುಂದೆ ಕುಸಿದಳು ಪ್ರಭು ಸಮಾಧಿಯಿಂದ ಹೊರ ಬಂದು ಭಕ್ತರಿಗೂ ಆಕೆಗೂ ಸಮಾಧನ ಪಡಿಸಿ ಸಮಾಧಿ ದಿವಾಸುವನ್ನು ಬೇರೆ ದಿವಸದಂದು ನಿಶ್ಚಯಿಸಿದರು ತಾವು ನಿಶ್ಚಯಿಸಿ ಬೆಳಿಗೆ ಫಾಲ್ಗುಣ ಚತುರ್ದಶಿರೋಜ ಸೋಮವಾರ ದಿನಾಂಕಃ ೨-೦೩-೧೮೬೩ ಶಾಲಿ ವಾಹನ ಶಕೆ ೧೭೮೫ ರಂದು ಎಲ್ಲರೂ ನೋಡುತ್ತಿದ್ದಂತೆಯೆ ಪ್ರಭು ಆನಂದ ತಲ್ಲಿನರಾಗಿ ಸಮಾಧಿ ಪ್ರವೇಶಿಸಿದರು ಯೋಗಾಸನ ನಿಷ್ಠರಾಗಿ ಧ್ಯಾನದಲ್ಲಿ ಲೀನರಾದರು ಅವರ ಆದೇಶ ಅನುಸಾರವಾಗಿ ಸಮಾಧಿ ದ್ವಾರವನ್ನು ಮುಚ್ಚಿಹಾಕಿದರು ನಂತರ ಭಕ್ತರು ಪ್ರಭುವಿನ ರೀತಿ ವರ್ಣಿಸುತ್ತ ಭಜನೆ ಮಾಡುತ್ತ ಧಾನ್ಯದಲ್ಲಿ ಲೀನರಾದರು.

## ಮಾಣಿಕ ಪ್ರಭುಗಳ ಲೀಲೆಗಳು

ಗುರು ಗಂಗಾಧರ ಬಕ್ಕ ಪ್ರಭುಗಳು ಮುಂದೆ ಮಾಣಿಕ ಪ್ರಭುಗಳ ಅವತಾರ ಧರಿಸಿ, ಮತ್ತೊಮ್ಮೆ ಭಕ್ತರಿಗೆ ದರ್ಶನ ನೀಡಿ ತಮ್ಮ ಲೀಲೆಗಳನ್ನು ಅನುಗ್ರಹಿಸಿದರು. ಕಲ್ಯಾಣ ನಗರದ ಸಮೀಪ ಲಾಡವಂತಿ ಎನ್ನುವ ಗ್ರಾಮದಲ್ಲಿ ಮಾಣಿಕ ಪ್ರಭುಗಳ ಜನನವಾಯಿತು. ಪ್ರಭುಗಳು ಬಾಲ್ಯದಿಂದಲೆ ಅನೇಕ ಪವಾಡಗಳನ್ನು ಮಾಡುತ್ತಾ ತಮ್ಮೋಸ್ಥಿತಿಯಲ್ಲಿಯೇ ಇರುತ್ತಿದ್ದರು. ಬಾವಗಿ ಗ್ರಾಮದಲ್ಲಿ ದಶೋಪಂಥ ಎಂಬ ರೋಗ ಗ್ರಸ್ಥನಿದ್ದನು. ಜೀವನದಿಂದ ಆಸೆ ತೊರೆದು ಗುರುನಾಮ ಜಪಿಸುತ್ತ ತನ್ನ ಮರಣದಾರಿ ಕಾಯುತ್ತಿದ್ದ ಒಂದು ದಿನ ಪ್ರಭುಗಳು ಬಾವಗಿ ಗ್ರಾಮಕ್ಕೆ ತೆರಳಿ ಫಕೀರನ ವೇಷಧರಿಸಿ ಅರ್ಧರಾತ್ರಿಯಲ್ಲಿ ದಾಸೋಪಂಥನ ಮನೆ ಬಾಗಿಲನ್ನು ತಟ್ಟಿದರು. ಆಗ ಇವರನ್ನು ಒಳಗೆ ಕರೆದು ಆಸನದ ಮೇಲೆ ಕೂಡಿಸಿ ಉಪಚರಿಸಿದನು ಪ್ರಭುಗಳು ದಾಸೋಪಂಥನನ್ನು ವಿಕ್ಷಿಸಿದಾಗ ಅವನು ಔಷದೋಪಚಾರವು ತೆಗೆದು ಕೊಳ್ಳುವ ಸ್ಥಿತಿಯಲ್ಲಿ ಇರಲಿಲ್ಲ ಮಾಣೀಕ ಪ್ರಭುಗಳು ಆತನನ್ನು ನೋಡಿ ಜೋರಾಗಿ ನಗಲು ಪ್ರಾರಂಭಿಸಿದರು ತಕ್ಷಣವೇ ಪ್ರಭುಗಳ ಕಾಲಿಗೆರಗಿದ ದಾಸೋಪಂಥನನ್ನು ಎಬ್ಬಿಸಿ, ಕೂಡಿಸಿ ಕೊಂಡಕ್ಷಣವೆ ಆತನ ರೋಗ ಉಪಶಮನವಾಯಿತು ನಾನು ನಿನಗೆ ಹನ್ನೆರಡು ವರ್ಷ ಆಯುಷ್ಯ ಕೊಡುತ್ತಿದ್ದೇನೆ ಆ ದಿನಗಳನ್ನು ನೀನು ಒಳ್ಳೆಯ ರೀತಿಯಲ್ಲಿ ಬಳಸಿಕೊಂಡು ಮುಕ್ತಿಯ ಮಾರ್ಗಕಂಡುಕೊಳ್ಳು ನಿನಗೆ ಶುಭವಾಗಲಿ.

ವೆಂಕಪ್ಪನಿಗೆ ಮಾತು ಕೊಂಟ್ಟಂತೆ ರೇಖುಳಗಿ ಗ್ರಾಮಕ್ಕೆ ಹೋದ ಪ್ರಭುಗಳು ವೆಂಕಪ್ಪನ ಮನೆಯ ಬಾಗಿಲಿಗೆ ಬಂದರು ವೆಂಕಪ್ಪ ಅವರನ್ನು ನೋಡಿ ನಮಸ್ಕಾರ ಮಾಡಲಿಲ್ಲ. ಆತನು ಗುರು ಗಂಗಾಧರ ಬಕ್ಕ ಪ್ರಭುಗಳ ಭಕ್ತಾನಾಗಿದ್ದರಿಂದ ತನ್ನ ಗುರುವಿಗಲ್ಲದೇ ಯಾರನ್ನು ಆತ ನಮಸ್ಕಾರ ಮಾಡುತ್ತಿರಲಿಲ್ಲ.ಪ್ರಭುವಿನ ನಾಮ ಜಪಿಸುತ್ತಿದ್ದ ಪ್ರಭುಗಳ ಆತನ ಜೋತೆ ವೇದಾಂತದ ಚರ್ಚೆ ಮಾಡಿದರು ಆದರು ವೆಂಕಪ್ಪ ಎದುರಿನ ವ್ಯಕ್ತಿ ಬಕ್ಕ ಪ್ರಭುಗಳಿರುವರು. ಅವರೆ ನನ್ನ ಗುರುವೆಂದು ಗ್ರಹಿಸಲಿಲ್ಲ. ಕೊನೆಗೆ ಮಾಣಿಕ ಪ್ರಭುಗಳು ಬಕ್ಕಪ್ರಭುಗಳು ನಿನ್ನ ಬಳಿ ನಾಯಿಮರಿಗಳನ್ನು ಇಟ್ಟಿದ್ದಾರೆ. ನನಗೆ ಅವುಗಳನ್ನು ಒಪ್ಪಿಸು ಎಂದು ಕೇಳಿ ಪೂರ್ವದ ನೆನಪನ್ನು ಮಾಡಿ ಆತನ ಪುತ್ರರಿಬ್ಬರನ್ನು ಕೊಡಲು ಹೇಳಿದರು. ಆದರೂ ವೆಂಕಪ್ಪ ತನ್ನ ವಿಶ್ವಾಸ ಬಲ ಪಡಿಸಿಕೊಳ್ಳಲು ಮತ್ತು ಪ್ರಭುವಿನ ರೂಪದಲ್ಲಿ ದರ್ಶನ ಪಡೆಯಲು ದಯವಿಟ್ಟು ನನ್ನನ್ನು ಬಕ್ಕ ಪ್ರಭುಗಳ ರೂಪದಲ್ಲಿ ಕಾಣಿಸಿಕೊಂಡು ಧನ್ಯನಾಗಿ ಮಾಡಿ ಎಂದು ಕೇಳಕೊಂಡನು. ಆತನ ಕೋರಿಕೆ ಮನ್ನಿಸಿ ಮಾಣಿಕ ಪ್ರಭುಗಳು ಬಕ್ಕಪ್ರಭುಗಳ ರೂಪದಲ್ಲಿ ಸಾಕ್ಷಾತ್ಕರಿಸಿ ಆತನನ್ನು ಆಶಿರ್ವದಿಸಿದರು. ವೆಂಕಪ್ಪ ತನ್ನ ಪುತ್ರರಾದ ಜಯಕಾಂ ಮತ್ತು ಗೋಪಾಲನನು ಪ್ರಭುಗಳ ಪಾದಕ್ಕೆ ಅರ್ಪಿಸಿದಾಗ ಪ್ರಭುಗಳು ವೆಂಕಪ್ಪ ನಿನ್ನ ಪುತ್ರರಲ್ಲಿ ಒಬ್ಬರನೇ ನನ್ನ ಜೊತೆ ಕಳುಹಿಸಿಕೊಡು ಇನ್ನೊಬ್ಬನಿಂದ ನಿನ್ನ ವಂಶ ಬೆಳೆಯಲಿ ಎಂದು ಹಾರೈಸಿ ಗೋಪಾಲನನ್ನು ತಮ್ಮೊಂದಿಗೆ ಕರೆದುಕೊಂಡು ಹೋದರು.

## ಪರಿಯಾಗಿ ಕೂಡಿತ್ತು ಭಕ್ತಗಣ

ಆಗ ಬದುಕಬೇಕು ಸಮಾಜದ ಎಲ್ಲರೂ ಸುಖ ಸಂತೃಪ್ತಿಯಿಂದ ಬದುಕಬೇಕೆಂಬುದು ಜಾನಪದ ಆಶ್ರಯ ಈ ಆಶ್ರಯದ ನೆಲೆಯಲ್ಲಿಯೇ ಜಾತ್ರೆಯಂಬುದು ಹುಟ್ಟಿಕೊಂಡಿದೆ. ಜಾತ್ರೆಗಳಿಗೆ ಇನ್ನೊಂದು ಮಹತ್ವವುಂಟು. ಜಾತ್ರೆ ಊರಿನ ಒಕ್ಕಟ್ಟಿನ ಸಂಕೇತ. ಇಡೀ ಊರಿಗೆ ಪ್ರೇರಣೆಯನುಂಟು ಮಾಡುವುದು. ಜಾತ್ರೆಗೆ ಬೇರೆ ಉರಿನ ಬಂಧು ಬಳಗದವರನ್ನು ಆಮಂತ್ರಿಸಿ ಅವರ ಮನ ತೃಪ್ತಿಪಡಿಸಿ ರಂಜಿಸುವುದು ಎಲ್ಲರಿಗೂ ಸಂತೋಷಗೊಳಿಸುವ ಕೆಲಸವೇ ಆಗಿದೆ.

ಒಟ್ಟಿನಲ್ಲಿ ಜನಮನದಲ್ಲಿ ಧಾರ್ಮಿಕ ಭಾವನೆಗಳನುದ್ದೇಷಿಸಿ ಭಕ್ತಿ ಭಾವವನ್ನು ಪೋಷಿಸಿ ನೈತಿಕ ಸತ್ಯವನ್ನು ಮರ್ತ್ಯದಲ್ಲಿ ಅಮರ್ತ್ಯವನ್ನು ಕಾಣಿಸಿ ಸಮಗ್ರ ಧಾರ್ಮಿಕ ವಾತವರಣವನ್ನು ನೆಲೆಗೊಳ್ಳಿಸುವುದೆ ಜಾತ್ರೆಯ ವೈಶಿಷ್ಟ.

ಶ್ರೀ ಗುರುಗಂಗಾಧರ ಬಕ್ಕ ಪ್ರಭುಗಳು ಜೀವಂತ ಸಮಾದಿಯಾಗಿದ ಸ್ಥಳದಲ್ಲಿ ಪ್ರಭುಗಳ ಭಕ್ತರು ಗುಡಿಯನ್ನು ಕಟ್ಟಿ ಪ್ರತಿ ವರ್ಷ ಜಾತ್ರೆಯನ್ನು ಮಾಡುತ್ತ ಬಂದಿದ್ದಾರೆ. ಜಾತ್ರೆ ಪ್ರತಿಯೊಬ್ಬನಲ್ಲಿ ಧಾರ್ಮಿಕ ಶ್ರದ್ಧೆ ಹುಟ್ಟಿಸಿ ಅವರವ ನಡುವಳಿಕೆಗಳನ್ನು ಉತ್ತಮಗೊಳಿಸಲು ಕಾರಣವಾಗಿದೆ. ಬಂದ ಭಕ್ತರು ಸಾಮಾಹಿಕವಾಗಿ ಕುಳಿತು ಭಜನೆ, ಕೀರ್ತನೆ, ಪ್ರವಚನ, ರಥೋತ್ಸವ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸಂತೋಷ ಪಡುತ್ತಾರೆ. ಪ್ರಭುವಿನ ಜಾತ್ರೆಯಲ್ಲಿ ಸತತ ಐದು ದಿವಸಗಳ ಕಾರ್ಯಕ್ರಮವಿರುತ್ತದೆ.

ಗುಡಿಯಲ್ಲಿ ಪ್ರಭುವಿನ ಪ್ರತಿ ರೂಪದ ಮೂರ್ತಿಯ ಬಕ್ಕಪ್ಪನವರ ಮನೆಯಲ್ಲಿಯೂ ಇದೆ. ಈ ಮೂರ್ತಿಯನ್ನು ಹೋಳಿ ಹುಣ್ಣಿಮೆಯ ಮರುದಿವಸ ನಸುಕಿನಲ್ಲಿ ಪಲ್ಲಕ್ಕಿಯೊಳಗೆ ಇಟ್ಟು, ಮೆರವಣಿಗೆಯ ಸಮೇತ ಪ್ರಭುಗಳು ಅನುಷ್ಠಾನ ಹೊಂದಿದ ಗದ್ದುಗೆ ದೊಡ್ಡಿಗೆ ತೆಗೆದುಕೊಂಡು ಹೋಗುತ್ತಾರೆ. ಹಾಗೆ ಹೋಗುವಾಗ ಪ್ರಾರ್ಥನೆ ನುಡಿಗಳನ್ನು ನುಡಿಯುತ್ತಾರೆ. ಇವು ಕೇಳುಗರಿಗೆ ಆಕರ್ಷಣೆಯನ್ನು ನೀಡುತ್ತವೆ. ಹೀಗೆ ಬಕ್ಕಪ್ರಭುಗಳ ಸಾನಿಧ್ಯದಲ್ಲಿ ಭಕ್ತರೆಲ್ಲ ಸದ್ಭಾವನ ಜೀವನ ಸಾಗಿಸುತ್ತಲಿದ್ದಾರೆ.

# ಲಿಂಗಾಯಪ್ಪನವರ ದೇವಸ್ಥಾನ

ಬೀದರ ತಾಲ್ಲೂಕಿನಲ್ಲಿ ಬರುವ ಮನ್ಹಳ್ಳಿ ಗ್ರಾಮವು ಐತಿಹಾಸಿಕ ಚರಿತ್ರೆ ಪಡೆದಿದೆ. ಈ ಗ್ರಾಮದಲ್ಲಿ ಶಿವಶರಣರು ಬದುಕಿದ್ದಾರೆ. ಅವರ ಸಾಮಾಜಿಕ, ಧಾರ್ಮಿಕ ಚಿಂತನೆಯು ಗ್ರಾಮದ ಜನರಲ್ಲಿ ಪ್ರಸ್ತುತವಾಗಿರುತ್ತದೆ.

ಮನ್ಹಳ್ಳಿ ಗ್ರಾಮವು ಪ್ರಕೃತಿ ಸೌಂದರ್ಯಕ್ಕೆ ಹೆಸರಾಗಿದೆ. ಇಲ್ಲಿಯ ಹಚ್ಚಹಸುರಿನ ಗೀಡ ಮರಗಳು, ಮಟ್ಟದೊಂದು ಕರೆ, ವಿವಿಧ ಜಾತಿಯ ಜನಾಂಗದವರು ವಾಸಿಸುತ್ತಿದ್ದಾರೆ. ಸೌಹಾರ್ದತೆಯ ಭಾವನೆ ಪ್ರತಿಕವಾಗಿ ಮಂದಿರಗಳು, ಮಸೀದಿಗಳು ಚರ್ಚಗಳು ಈ ಗ್ರಾಮದಲ್ಲಿವೆ. ಅವೆಲ್ಲವುಗಳ ಧಾರ್ಮಿಕತೆಯ ಮೂಲ ತತ್ವ ಒಂದೇಯೇಂದು ತಿಳಿದುಬರುತ್ತದೆ. ಧಾರ್ಮಿಕ ಆಚಾರ ವಿಚಾರಗಳೆಲ್ಲವು ಒಂದೇಯಾಗಿರುವುದು ವಿಶೇಷ.

ಈ ಗ್ರಾಮದಲ್ಲಿ ಅತಿ ಪ್ರಾಚೀನವಾದ ದೇವಸ್ಥಾನ ಸಂಗಮೇಶ್ವರ ದೇವಸ್ಥಾನವೆಂದು ಹೇಳಲಾಗುತ್ತದೆ. ಇದು ಬೀದರ ತಾಲ್ಲೂಕಿನಿಂದ ೨೦ ಕಿ.ಮೀ. ದೂರದಲ್ಲಿದೆ. ಮಾನವಿಯತೆಗೆ ಹೆಸರಾಗಿರುವ ಈ ಗ್ರಾಮದಲ್ಲಿ ಕೊಮುಗಲಬೆಗೆ ಅವಕಾಶವಿಲ್ಲದಿರುವುದು ವಿಶೇಷವಾಗಿದೆ. ಈ ಗ್ರಾಮದಲ್ಲಿ ಕಬ್ಬು ಅಗೇಯುವ ಸಕ್ಕರೆ ಕಾರ್ಖಾನೆಗಳಿವೆ. ಈ ಕಾರ್ಖಾನೆಗಳು ಸ್ಥಳೀಯರ ಕೃಷಿ ಚಟುವಟಿಕೆಗಳಿಗೆ ಉತ್ತೇಜನ ನಿಡುವಂತಹವುಗಳಾಗಿವೆ. ಅನುಕೂಲಕರವಾದ ವಾತಾವರಣ ಹೊಂದಿರುವ ಮನ್ಹಳ್ಳಿ ಗ್ರಾಮವು ವಿವಧತೆಯಲ್ಲಿ ಏಕಿತೆಯ ಪ್ರತಿಕವಾಗಿರುವಂತಹದು. ಈ ಗ್ರಾಮದಲ್ಲಿ ಸಮಾಜಿಕ, ಆರ್ಥಿಕ, ರಾಜಕೀಯ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿದ್ದಾರೆ. ಈ ಗ್ರಾಮದಲ್ಲಿ ವ್ಯಾಪಾರ ಉದ್ಯೋಮವು ಸುತ್ತ ಹಳ್ಳಿಗಳಿಗೆ ಕೇಂದ್ರವಾಗಿದೆ.

### ಸಾಮಾಜಿಕ ಜೀವನ

ಮನ್ಹಳ್ಳಿ ಗ್ರಾಮದಲ್ಲಿ ಜನರ ಜೀವನ ಪದ್ಧತಿ ಏಕ ರೂಪವಾಗಿದೆ. ಎಲ್ಲರೂ ಕಾಯಕ ಮಾಡಿಕೊಂಡು ತಮ್ಮ ಜೀವನ ಸಾಗಿಸುತ್ತಾರೆ. ನಿರುದ್ಯೋಗಿಗಳಿಗೆ ಗ್ರಾಮದಲ್ಲಿ ಉದ್ಯೋಗದ ಕೊರೆತೆಯಿದೆ. ಅದಕ್ಕಾಗಿ ಬೇರೆ ಸ್ಥಳಗಳಿಗೆ ವಲಸೆ ಹೋಗುತ್ತಾರೆ. ಉದಾ:– ಹೈದಾಬಾದ, ಮೋನಾ, ಬಾಂಬೆ, ಜಹೀರಾಬಾದ ವಿವಿಧ ಸ್ಥಳಗಳಿಗೆ ಉದ್ಯೋಗಕ್ಕಾಗಿ ವಲಸೆ ಹೊಗುತ್ತಾರೆ. ಗ್ರಾಮದಲ್ಲಿ ಸಾಮಾಜಿಕ ಸಮಾನತೆಯ, ಸಾಂಸ್ಕೃತಿಕ ವಿಭನ್ನತೆ, ಪಾರಂಪಾರಿಕ ಜೀವನ ಶೈಲಿ ಮುಂತಾದವುಗಳು ಕಂಡು ಬರುತ್ತವೆ. ಅವರ ಜೀವನ ಪದ್ಧತಿಯಲ್ಲಿ ಭೀನ್ನವಾಗಿದ್ದರು ಹಬ್ಬ – ಹರಿದಿನಗಳಲ್ಲಿ ಹಿಂದು – ಮುಸ್ಲಿಂ ಪರಸ್ಪರ ಕೈ – ಕುಲುಕುತ್ತಾರೆ. ಸೌಹಾರ್ದತೆಯ ಪ್ರೇಮ ಭಾವನೆಯನ್ನೆ ಬೆಳೆಸಿಕೊಳ್ಳತ್ತಾರೆ. ಹಬ್ಬದ ಶುಭಾಷಯಗಳು ತಿಳಿಸುತ್ತಾರೆ. ರಂಜಾನ್ ತಿಂಗಳು ಮುಗಿದ ಬಳಿಕ ಹಿಂದು ಮುಸ್ಲಿಂ ಭಾವೈಕ್ಯತೆಯ ಸಂದೇಶಸಾರುವ ಕಾರ್ಯಕ್ರಮವೊಂದು ಜರಗುತ್ತದೆ. ಈ ಕಾರ್ಯಕ್ರಮದಲ್ಲಿ ವಿವಿಧ ಜಾತಿ–ಉಪಜಾತಿಯ ಮುಖಂಡರು ಭಾಗವಯಿಸುವುದು ವಿಷೆಶವಾಗಿದೆ.

## ಧಾರ್ಮಿಕ ಜೀವನ

ಗ್ರಾಮದಲ್ಲಿ ವಿವಿಧ ಧರ್ಮ, ಜನಾಂಗ, ಭಾಷೆಯವರು ವಾಸಿಸಿದರು ಪರಸ್ಪರ ಹಸ್ತಕ್ಷೇಪ ಮಾಡುವುದಿಲ್ಲ. ಗ್ರಾಮದಲ್ಲಿ ದಸರಾ, ದೀಪಾವಳಿ, ರಕ್ಷಾ ಬಂಧನ, ಮುಂತಾದ ಸಾಂಪ್ರದಾಯಕ ಹಬ್ಬಗಳು ಆಚರಿಸುತ್ತಾರೆ. ವಿಶೇಷ ಪೂಜಾ ಪದ್ಧತಿಯನ್ನು ಅನುಸರಿಸುತ್ತಾರೆ. ಈ ಕಾರ್ಯಕ್ರಮದಲ್ಲಿ ಹಿಂದು – ಮುಸ್ಲಿಂ ಭಾಂಧವರು ಭಾಗವಹಿಸುತ್ತಾರೆ. ಇದೊಂದು ಮಾನವಿಯತೆಯ ಪ್ರತಿಕವಾಗಿರುವುದು. ವಿಶೇಷ.

ಮನ್ನಳ್ಳಿ ಗ್ರಾಮದ ಸಾಮಾಜಿಕ ಸಾಮಾನತೆ, ಧಾರ್ಮಿಕ ಐಕ್ಯತೆ, ಮಾನವಿಯತೆ ಸೌಹಾರ್ದತೆಯ ಬದುಕಿಗೆ ಪ್ರೇರಣಾತ್ಮಕವಾಗಿರುವಂತಹದ್ದಾಗಿದೆ. ಈ ಗ್ರಾಮದಲ್ಲಿ ಶಿವಶರಣರು ನೀಡಿದ ಕೊಡುಗೆ ಪ್ರಸ್ತುತ ಜೀವನದ ಮೌಲ್ಯತೆಗೆ ಸ್ಫೂರ್ತಿದಾಯಕವಾಗಿದೆ. ಲಿಂಗೇಶ್ವರ ಸ್ವಾಮಿಜಿಯವರು ಗ್ರಾಮಕ್ಕೆ ಆಗಮಿಸಿದರು. ಇವರು ಮೂಲತಃ ಎಲ್ಲಿಯವರು ಎಂಬುದರ ಬಗ್ಗೆ ತಿಳಿಯದು. ಆದರೆ ಕಾಶಿಯಾತ್ರೆಯನ್ನು ಮುಗಿಸಿಕೊಂಡು ದಕ್ಷಿಣ ಭಾರತದ ಕಡೆ ಬಂದ ನಾಲ್ಕು ಜನ ಶಿವ ಶರಣರಲ್ಲಿ ಲಿಂಗೇಶ್ವರ ಶರಣರು ಒಬ್ಬರಾಗಿದ್ದಾರೆ ಎಂಬುವುದ್ದಾಗಿ ತಿಳಿದು ಬರುತ್ತದೆ.

## ಲಿಂಗೇಶ್ವರ ಜೀವನ ವೃತ್ತಾಂತ

ಲಿಂಗೇಶ್ವರ ಶರಣರು ಮನ್ನಳ್ಳಿಯ ಪ್ರಾಚೀನ ಸಂಗಮೇಶ್ವರ ದೇವಸ್ಥಾನದಲ್ಲಿ ಬಂದು ನೆಲಸಿದ್ದರು. ಅವರು ಧೃಡಕಾಯ ದೇಹ, ಗಾಂಬಿರ್ಯ್ಯಯುಕ್ತರಾಗಿದ್ದು ಜ್ಞಾನಿಯಾಗಿದ್ದರು ಎಂದು ಜನರ ಅಭಿಪ್ರಾಯವಾಗಿವೆ. ಸಂಗಮೇಶ್ವರ ದೇವಸ್ಥಾನದ ಸುತ್ತಲು ದಟ್ಟ ಅರಣ್ಯವಿತ್ತು. ಅಲ್ಲಿಗೆ ಉರಿನ ಜನರು ಹೋಗಲು ಭಯ ಭೀತರಾಗುತ್ತಿದ್ದರು. ಅಂತಹ ನಿರ್ಜನ ಪ್ರದೇಶದಲ್ಲಿ ಲಿಂಗೇಶ್ವರ ಶರಣರು ಏಕಾಂಗಿಯಾಗಿ ಅನುಷ್ಠಾನ ಕೈಗೊಂಡರು (ತಪೂನಿಷ್ಠರಾಗಿರುತ್ತಿದ್ದರು). ಅಲ್ಲಿಯ ಬೆಳೆದಿರುವ ಬಿಲ್ವ ಪತ್ರೆಯನ್ನೆ ತಿಂದು ಆಧ್ಯಾತ್ಮಿಕತೆಯಲ್ಲಿ ನಿರತರಾಗಿರುತ್ತಿದ್ದರು. ಗ್ರಾಮದ ಜನರೆಲ್ಲ ಸೇರಿ ದೇವಸ್ಥಾನದಲ್ಲಿರುವ ಶರಣರನ್ನು ಉರಿಗೆ ಕರೆತರುವ ವ್ಯವಸ್ಥೆ ಮಾಡಿಕೊಂಡರು. ಲಿಂಗೇಶ್ವರ ಶರಣರನ್ನು ಗ್ರಾಮಕ್ಕೆ ಸ್ವಾಗತ ಮಾಡಿ ಪ್ರವೇಶಿಸಲು ಪ್ರಮುಖವಾಗಿ ಸಂಗೋಳಗಿ ಮನೆತನದವರು ಕಾರಣರಾಗಿದ್ದಾರೆ. ಈ ಗ್ರಾಮದಲ್ಲಿ ಹಿಂದಿನಿಂದಲು ಈ ಮನೆತನವು ಪ್ರಸಿದ್ಧ ಧಾನ, ಸಹಾಯ, ಸಹಕಾರ, ಮುಂತಾದವುಗಳು ಈ ಮನೆತನದಲ್ಲಿ ಹುಟ್ಟು ಗುಣವೆಂದು ಹೇಳಬಹುದು. ಇಂದಿಗೂ ಈ ಮನೆತನದವು ಗ್ರಾಮದಲ್ಲಿರುವುದು ಕಂಡು ಬರುತ್ತದೆ. ಗ್ರಾಮದ ಜನರು ಲಿಂಗೇಶ್ವರ ಶರಣರಿಗೆ ಸ್ಥಳವಕಾಶ ಕಲ್ಪಿಸಿಕೊಟ್ಟಿದ್ದರು. ತರುವಾಯ ಈ ಶರಣರು ಅದೇ ಸ್ಥಳದಲ್ಲಿ ಭೂಮಿಯ ಆಳ ಅಡಿಯಲ್ಲಿ (ಸು. ೩–೪ ಅಡಿ) ಬೃಹದಾಕಾರದ ಗುಹೆಯನ್ನು ಸ್ವತಃ ತಾವೇ ಕೊರೆದಿದ್ದಾರೆ ಎಂಬುವುದ್ದಾಗಿ ತಿಳಿದು ಬರುತ್ತದೆ. ಅದು ಇಂದಿಗೂ ಪ್ರಸಿದ್ಧವಾಗಿದೆ. ಗುಹೆ ಜಂಬಿಟ್ಟಿಗೆಯ ಶಿಲೆಯಿಂದ ಕೊಡಿದ್ದು ಅದು ವಿಶೇಷ ವಿನ್ಯಾಸವನ್ನು ಹೊಂದಿದೆ. ಈ ಗುಹೆಯೊಳಗೆ ಏಕಾಂಗಿಯಾಗಿ ಕುಳಿತು ದೀರ್ಘ ಕಾಲದವರೆ ಧ್ಯಾನಾಸಕ್ತನಾಗುವುದು ಅಸಾಧ್ಯವಾಗಿರುವುದು ಸತ್ಯ ಸಂಗತಿಯಾಗಿದೆ. ಲಿಂಗೇಶ್ವರ ಶರಣರು ಸ್ವತಃ ತಾವೇ ಈ ಗುಹೆಯನ್ನು ವಿನ್ಯಾಸ ಗೋಳಿಸಿದ್ದಾರೆ. ಇದು ಕಾಯಕ ನಿಷ್ಠರು, ಸ್ವಾಭೀಮಾನಿಗಳು, ನಿಷ್ಕಾಮ ಹೃದಯವಂತರು ಆಗಿದ್ದರು ಎಂದು ತಿಳಿದು ಬರುತ್ತದೆ.

ಲಿಂಗೇಶ್ವರ ಶರಣರ ಈ ಗುಹೆಯ ಪೃಕೃತಿ ಸೌಂದರ್ಯದ ಪ್ರತೀಕವಾಗಿದೆ. ಈ ಗುಹೆಯ ಒಂದು ಮಾರ್ಗ ಸಮೀಪದ ಚಿಂತಲಗೀರಾ ಗ್ರಾಮದ ದೇವಸ್ಥಾನಕ್ಕೆ ತಲುಪುವುದು ಈ ಮಾರ್ಗವಾಗಿ ಅನೇಕ ಭಕ್ತಾದಿಗಳು ಪೂಜಾ ಕಾರ್ಯಕ್ಕೆ ತೆರಳುತ್ತಿದ್ದರು ಎಂಬುದು ಜನರ ವಾಡಿಕೆಯಾಗಿದೆ.

ಲಿಂಗೇಶ್ವರ ಶರಣರು ಆಧ್ಯಾತ್ಮಿಕ ಮರುಷಿರಾಗಿದ್ದರು. ಅವರು ದಿನವಿಡಿ ಧ್ಯಾನದಲ್ಲಿ ತೊಡಗಿರುತ್ತಿದ್ದರು. ಸಾಯಂಕಾಲದಲ್ಲಿ ಅಲ್ಲಿಯೇ ಇರುವ ಹುಣಸೇ ಮರದ ಕೆಳಗಿನ ಕಟ್ಟೆಯೊಂದರ ಮೇಲೆ ಕುಳಿತು ತತ್ವ ಭೋದನೆ ಭೋದಿಸುತ್ತಿದ್ದರು. ಇವರ ವಿಚಾರಗಳನ್ನೆ ಆಲಿಸಲು ಸುತ್ತಮುತ್ತಲಿನ ಸಣ್ಣ ಪುಟ್ಟ ಹಳ್ಳಿಗಳ ಜನತೆ ಕಾಲ್ನಡಿಗೆಯಲ್ಲಿ ಬರುತ್ತಿದ್ದರು. ಹೀಗೆ ನಿಸ್ವಾರ್ಥ ಬದುಕಿನ ರಹಸ್ಯವು ಜನರ ಜೀವನದ ಪರಿವರ್ತನೆ ಕಾರಣವಾಯಿತ್ತು.

ಶರಣರ ವಿಚಾರಗಳು ವಿಶ್ವಕ್ಕೆ ಮಾದರಿಯಾಗಿರುತ್ತಿದ್ದವು. ಇವರ ಪ್ರವಚನ ಕಾರ್ಯಕ್ರಮಕ್ಕೆ ಎಲ್ಲಾ ಧರ್ಮದ ಜನರು ಭಾಗವಹಿಸುತ್ತಿದ್ದರು. ಅವರೆಲ್ಲರಿಗೂ ಸರ್ವಸಮ್ಮತವಾದ ವಿಚಾರಗಳನ್ನು ಪ್ರಚಾರ ಮಾಡುತ್ತಿದ್ದರು. ಹೀಗೆ ಸೌಹಾರ್ದತೆಯ ಬದುಕಿಗೆ ಮಾರ್ಗದರ್ಶಕರಾಗಿ, ಆದರ್ಶ ಸಮಾಜ ನಿರ್ಮಾಣಕಾರರಾಗಿ, ಬದುಕಿನ ವಾಸ್ತವಿಕತೆಯನ್ನೆ ಅರಿತುಕೊಂಡವರಾಗಿ, ಭಕ್ತಿಯ ಕಾಯಕದ (ನಿಷ್ಠೆ) ಪ್ರತಿಕವಾಗಿರುತ್ತದೆ. ಎಂಬುದಾಗಿ ತಿಳಿದು ಬರುತ್ತದೆ.

ಜ್ಞಾನಯೋಗಿ, ಕರ್ಮಯೋಗಿ, ಕಾಯಕ ನಿಷ್ಠರಾಗಿರುವ ಲಿಂಗೇಶ್ವರರ ವ್ಯಕ್ತಿತ್ವದ ಛಾಯೇ ಗ್ರಾಮದ ಜನತೆಯಲ್ಲಿ ಪರಂಪರಾನುಗತವಾಗಿ ನಡೆದುಕೊಂಡು ಬಂದಿರುವುದು ವಿಶೇಷವಾಗಿದೆ. ಗ್ರಾಮದಲ್ಲಿ ಜನರು ಶಾಂತಿ, ಸುರಕ್ಷತೆ, ಸೌಹಾರ್ದತೆಯ ಬದುಕಿಗೆ ಬೆಳಕಾಗಿದ್ದರು. ಇವರ ವ್ಯಕ್ತಿತ್ವ ಸಮಾಜ ಕಲ್ಯಾಣಕ್ಕೆ ಮಾದರಿಯಾಗಿದೆ. "ನುಡಿದಂತೆ ನಡೆದುಕೊಳ್ಳುವುದು ಅವರ ಗುಣ ಸ್ವಭಾವವಾಗಿತ್ತು". ಅವರು ನಿಷ್ಠುರರು ನಿರ್ಮಲ ಸ್ವಭಾವದವರು ಆಗಿದ್ದರು. ಹಿಂದು, ಮುಸ್ಲಿಂ, ಕ್ರೈಸ್ತ ಬಾಂಧವರಲ್ಲಿ ಐಕ್ಯತೆಯನ್ನು ಮೂಡಿಸುವಂತಹ ಚಾರಿತ್ರಿಕ ಸ್ವಭಾವದವರಾಗಿದ್ದರು. ಹೀಗಾಗಿ ಗ್ರಾಮದಲ್ಲಿ ಇಂದಿಗೂ ಧಾರ್ಮಿಕ, ಸಾಮಾಜಿಕ, ಸಾಂಸ್ಕತಿಕ ಚಟುವಟಿಕೆಗಳು ಕ್ರಿಯಾಶೀಲವಾಗಿವೆ. ಅವರು ಬದುಕಿರುವದು ನಿತ್ಯ, ಸತ್ಯ ಶರಣರಾಗಿದ್ದರು ಎಂಬುದಕ್ಕೆ ಅವರು ಬಳಸಿದ ಕೈ ಕಟ್ಟಿಗೆ ಮತ್ತು ಪಾದ ರಕ್ಷಗಳು ಗವಿಯೊಳಗೆ ಇವೆ. ಗ್ರಾಮದಲ್ಲಿ ಶಾಂತಿ, ಸೌಹಾರ್ದತೆಯ ಬದುಕಿಗೆ ಲಿಂಗೇಶ್ವರರ ಚರಿತ್ರೆ ವಿಶ್ವಕ್ಕೆ ಮಾದರಿಯಾಗಿದೆ. ಎಂದು ಹೇಳಬಹುದು

## ಶ್ರೀ ವೀರಭದ್ರಪ್ಪನವರ ದೇವಸ್ಥಾನ

ಹಳೆಂಬರ ಶ್ರೀ ವೀರಭದ್ರಪ್ಪ

ಬೀದರ ಪ್ರದೇಶದಲ್ಲಿ ಹಲವಾರು ಭವ್ಯವಾದ ಮಂದಿರ ಮಸಿದಿಗಳಲ್ಲದೇ ಶರಣರ, ಕಲೆಗಾರ, ಕವಿಗಳ, ಸಾಧು ಸತ್ಪುರುಷರ ಪುಣ್ಯ ಕ್ಷೇತ್ರದಿಂದ ಕೂಡಿರುವ ಗ್ರಾಮವಾಗಿದೆ. ಇದಕ್ಕೆ ಸಾಕ್ಷಿಯಾಗಿ ಹುಡಗಿಯ ಕರಬಸಪ್ಪ ಮಾಣಿಕನಗರದ ಮಾಣಿಕಪ್ರಭು, ಕರಕನಳ್ಳಿಯ ಬಕ್ಕಪ್ರಭು ಬಾವುಗಿಯ ಭದ್ರಪ್ಪ ನಾವದಗೀಯ ರೇವಪ್ಪಯ್ಯಾ, ಮೇದಾರ ಕೇತಯ್ಯಾ, ರೇಕುಳ್ಳಿಯ ಶಂಭುಲಿಂಗೇಶ್ವರ, ಯರನಳ್ಳಿಯ ದಿಗಂಬರ ಮಾಣಿಕೇಶ್ವರ ಹೀಗೆ ಮುಂತಾದ ಸಾಧು– ಸತ್ಪರುಷರು ಜನಿಸಿದ ಪವಿತ್ರವಾದ ನಾಡಿನ ವ್ಯಾಪ್ತಿಯಲ್ಲಿ ಪ್ರಣವ ಸ್ವರೂಪಿಯಾದ ಶ್ರೀಶ್ರೀಶ್ರೀ ವೀರಭದ್ರಪ್ಪ ಅಪ್ಪ ಶರಣರು ೧೯ನೇ ಶತಮಾನದಲ್ಲಿ ಹಳೆಂಬರ ಗ್ರಾಮದಲ್ಲಿ ಜನಸಿ ಬಂದುದು ಈ ನಾಡಿನ ಜನರ ಭಾಗ್ಯವೇ ಎನ್ನಬೇಕು.

ಬೀದರದಿಂದ ಔರಾದ (ಬಿ) ಗೆ ಹೋಗುವ ಮಾರ್ಗದಲ್ಲಿ ಜನವಾಡ ಎಂಬ ಗ್ರಾಮವಿದೆ. ಅದರ ಪಶ್ಚಿಮಕ್ಕೆ ಸುಮಾರು ೪ ಕಿ. ಮೀ. ದೂರದಲ್ಲಿರುವುದೆ ಹಳೆಂಬರ (ಅಲಿಯಂಬರ) ಗ್ರಾಮವಿದೆ. ಈ ಗ್ರಾಮಕ್ಕೆ ಇತ್ತೀಚಿಗೆ ಅಲಿಯಂಬರವೆಂದು ಕರೆಯುವ ವಾಡಿಕೆಯಿದೆ. ಆ ಗ್ರಾಮದಲ್ಲಿಯ ಶ್ರೀ ವೀರಭದ್ರಪ್ಪ ಅಪ್ಪನವರ ಮಂದಿರ ಭವ್ಯವಾಗಿದೆ. ಇದು ಊರಿಂದ ಸುಮಾರು ಎರಡು ಕಿಲೋ ಮೀಟರ್ ದೂರದಿಂದಲೆ ಈ ಭವ್ಯ ಮಂದಿರದ ಗೋಪುರ ಕಾಣಿಸುತ್ತದೆ. ಇದು ಬೀದರ ಜಿಲ್ಲೆಯ ಎಲ್ಲಾ ಹಳ್ಳಿ ಪಟ್ಟಣಗಳಿಗೆಲ್ಲಾ ಪ್ರಸಿದ್ಧವಾದ ಸುಂದರ ಸ್ಥಳವಾಗಿದೆ. ಬೀದರ ತಾಲ್ಲೂಕಿನ ಅಲಿಯಂಬರ ಗ್ರಾಮದ ಲಿಂಗಾಯತ ಧರ್ಮದ "ಶಿವಶೆಟ್ಟಿ" ಎಂಬ ಮನೆತನದಲ್ಲಿ ಬಡ ರೈತರಾದ ಸದ್ಭಕ್ತ ದಂಪತಿಗಳಾದ ಶ್ರೀಮತಿ ಶರಣೆ ಗ್ಯಾನಮ್ಮ ಮತ್ತು ಶ್ರೀ ಶರಣ ಜೀತಪ್ಪನವರ ಉದರದಲ್ಲಿ ಏಕೈಕ ಪುತ್ರನಾಗಿ ಸುಮಾರು ೧೮೭೫ ರಲ್ಲಿ ಜನನವಾಯಿತು.

ಮಗುವು ಜನಿಸಿದ ಮೇಲೆ ವೃದ್ಧದಂಪತಿಗಳಿಗೆ ಎಲ್ಲಿಲ್ಲದ ಸಂತೋಷವಾಯಿತು. ಬಂಧು ಬಳಗೆ ನೆಂಟರಿಷ್ಟರಿಗೆ ಆನಂದವೆ ಆನಂದ. ಮಗು ಜನಿಸಿದ ಐದನೇ ದಿವಸಕ್ಕೆ ಅವರ ತಂದೆ ತಾಯಿಯವರು ಹರ್ಷಗೊಂಡು ಎರಡು ಕುಟುಂಬದವರು ಆನಂದದಿಂದ ತಮ್ಮ ಮನೆಯ ದಿಕ್ಷಾ ಗುರುಗಳಾದ ಗಂಗಾಧರ ಮಠದ ಕುಮಾರ ಸ್ವಾಮಿ ಅವರಿಗೆ ಆಮಂತ್ರಣವಿಟ್ಟು ಲಿಂಗದಿಕ್ಷೆ ಮಾಡಿಸಿದರ. ಲಿಂಗ ಧಾರಣೆಯು ವೀರ ಶೈವ ಧರ್ಮದ ಒಂದು ಜೀವನ ಸಿದ್ಧಾಂತವಾಗಿದೆ. ಜೀವ ಶಿವನಾಗುವ, ಲಿಂಗ ಅಂಗವಾಗುವ ವಿಕಸನ ಹಂತ ಈ ಸಿದ್ಧಾಂತದಲ್ಲಿದೆ ಎಂದು ಶರಣರು ಹೇಳುತ್ತಾರೆ.

ಮಗು ಜನಿಸಿದ ಹನ್ನೆರಡನೆಯ ದಿವಸಕ್ಕೆ ಮನೆಯಲ್ಲಿ ತೊಟ್ಟಿಲು ಕಟ್ಟಬೇಕೆಂಬ ಹಿರಿಯರ ಆಸೆಯಿಂದ ತಂದೆ ತಾಯಿ ಬಂಧು ಬಳಗೆ ಊರ ಎಲ್ಲರಿಗೂ ಆಮಂತ್ರಣ ಕೊಟ್ಟು ಹನ್ನರಡನೆ ದಿವಸಕ್ಕೆ ತೊಟ್ಟಿಲ ಕಾರ್ಯಕ್ರಮ ವಿಜೃಂಭಣೆಯಿಂದ ಮಾಡಿ ಮಗುವಿಗೆ ವೀರಭದ್ರಪ್ಪ ಎಂಬ ಹೆಸರನ್ನಿಟ್ಟರು. ನಾಮಕರಣ ಮಾಡಿ ಹಲವಾರು ಜನರ ಬಾಯಿಯ ಹೊಗಳಿಕೆಗೆ ಶ್ರೀ ವೀರಭದ್ರಪ್ಪನವರು ರನ್ನ ಕನ್ನಡಿಯಾಗಿದ್ದರು. ಈ ಹೆಸರಿಗೆ ಶ್ರೇಷ್ಠ ಅರ್ಥ ಗಮನಿಸಬೇಕು. ಬೆಳೆಯುವ ಸಿರಿ ಮೊಳಕೆಯಲ್ಲಿ ಎನ್ನುವಂತೆ ಬಾಲಕನ ದಿವ್ಯ ಲಕ್ಷಣವನ್ನು ಕಂಡು ಬಲ್ಲವರು ಬಸವಾದಿ ಪ್ರಮಥರಂತೆ ಈ ಬಾಲಕ ಶಿವಶರಣನಾಗುವಂತೆ ಸೆತ್ಪುರುಷರು ಭವಿಷ್ಯ ನುಡಿದರು.

ವೀರ

ಶೂರ, ಶಕ್ತಿಶಾಲಿ, ಧೈರ್ಯವಂತ, ಜ್ಞಾನಿ, ಪರಾಕ್ರಮಿ ಬಲಿಷ್ಠ ನವರಸಗಳಲ್ಲಿ ಒಂದು.

ಭದ್ರ

ಶ್ರೇಯಸ್ಸು, ಗಟ್ಟಿಯಾದ; ಸುರಕ್ಷಿತ ಶುಕ್ರವಾರದ ಶಭುಕುರವಾದ ಶ್ರೇಷ್ಠವಾಗಿ ಕಟ್ಟುವ ಒಂದೇ ಕಡೆ ಬಿಗಿಯಾದ ಗಂಟು.

ಅಪ್ಪ

ದೇವರ ಮುಂದೆ ಹಿರಿಯರು ಎಂಬ ವಿವಿಧ ಅರ್ಥವನ್ನು ಹುಟ್ಟನಿಂದಲೆ ಹೊತ್ತುಕೊಂಡು ಬಂದ ಶ್ರೀ ವೀರಭದ್ರಪ್ಪನವರು ಮುಂದೆ ವೀರರಾಗಿ, ಶೂರರಾಗಿ, ತ್ರಿಕಾಲ ಜ್ಞಾನಿಯಾಗಿ, ಸಾಧಕರಾಗಿ ಸರ್ವಧರ್ಮ ಹಿತೈಷಿ ಪ್ರಾಣ ಪ್ರತಿಷ್ಠಾಪನ ಪುರುಷರಾಗಿ, ದತ್ತಾತ್ರೇಯ ಲಿಂಗ ಪ್ರೇಮಿಯಾಗಿ ಮೆರೆದು ಕೀರ್ತಿಪಡೆದರು ಶ್ರೀ ನಿರಂಜನ ಪುಣ್ಯನ ಸ್ವರೂಪಿ ಶ್ರೀ ಶರಣರು ನಮ್ಮ ನಾಡಿನಲ್ಲಿ ಜನಿಸಿದ್ದು ಪುಣ್ಯವಾಗಿದೆ.

ಹೈದ್ರಾಬಾದ್ ಕರ್ನಾಟಕ ಪ್ರದೇಶವು ನಿಜಾಮರ ಕಾಲದಲ್ಲಿ ಕೇವಲ ಉರ್ದು ಮತ್ತು ಇಂಗ್ಲೀಷ ಭಾಷೆ ಹೊರತು ಮತ್ತಾವ ಭಾಷೆಯ ಶಿಕ್ಷಣ ಇದ್ದಿರಲಿಲ್ಲ. ಜನರು ಗುಲಾಮಗಿರಿಯಲ್ಲಿ ತಮ್ಮ ಜೀವನ ಮೌಲ್ಯ ಕಳೆದುಕೊಂಡು ಪರತಂತ್ರರಾಗಿ ಬಾಳಬೇಕಾಗಿತ್ತು. ಶ್ರೀ ಜೀತಪ್ಪ ಮತ್ತು ಗ್ಯಾನಮ್ಮನವರು ಮಗನಿಗೆ ಓದಿಸಿ ದೊಡ್ಡ ಮನುಷ್ಯನಾಗಿರಬೇಕೆಂಬ ಹಂಬಲವಿಟ್ಟರು. ಅಂತಹದರಲ್ಲಿಯೇ ಶ್ರೀ ವೀರಭದ್ರಪ್ಪನವರು ನಾಲ್ಕನೇ ತರಗತಿಯವರೆ ವಿದ್ಯಾಭಾವ್ಯಸ ಮಾಡಿದರು. ಅಂದಿನ ನಾಲ್ಕನೇ ಇಂದಿನ ಬಿ. ಎ. ಪದವಿಗೆ ಸಮವಾಗಿತ್ತು. ಆದ್ದರಿಂದ ಅವರು ಜ್ಞಾನದ ಖಣಿಯಾಗಿದ್ದರು. ಬಡತನ ಕುಟುಂಬದದಲ್ಲಿ ಜನಿಸಿದ ಕಾರಣ ಅವರ ತಂದೆ ತಾಯಿಯವರು ಶಾಲೆಯನ್ನು ಬಿಡಿಸಿ ಮನೆ ಕೆಲಸ ಮಾಡಲು ಹಚ್ಚಿದ್ದರು. ಹರಿವನದಿಗೆ ಮೈಯಲ್ಲಾ ಕಾಲು – ಕಣ್ಣು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ, ಬೀಸುವ ಗಾಳಿಗೆ ಮೈಯಲ್ಲ ಕೈ" ಎನ್ನುವ ಶರಣರ ವಾಣಿಯಂತೆ ಪ್ರತಿಭೆಯಿದ್ದವರಿಗೆ ಬುದ್ಧಿ ತಾನೇ ತಾನಾಗಿ ಅರುಳವುದು. ಸಹಜವಾದಂತೆ ಶ್ರೀ ವೀರಭದ್ರಪ್ಪನವರಿಗೆ ಶಾಲೆ ಬಿಡಿಸಿದರು ಕೂಡಾ ಅವರ ಬುದ್ಧಿ ಹೆಚ್ಚಾಗ ತೊಡಗಿತ್ತು. ದಿನಗಳುರುಳತಿದಂತ್ತೆ ಶ್ರೀ ವೀರಭದ್ರಪ್ಪನವರಿಗೆ ಅಭೂತಪೂರ್ವ ಗುಣ ಲಕ್ಷಣ ಪ್ರಕಾಶ ಮಾನವಾಗಿ ಪ್ರಜ್ವಲಿಸತೊಡಗಿದ್ದವು.

ಹುಟ್ಟು – ಸಾವುಗಳ ಮಧ್ಯದಲ್ಲಿ ಸಾಧಿಸಿದ ಸಿದ್ಧಿ ಸಾಧನಗಳು ಬಹು ಮುಖ್ಯವೆಂದು ತನ್ನ ಮನದಲ್ಲಿ ಅರಿತುಕೊಂಡು ಶ್ರೀ ವೀರಭದ್ರಪ್ಪನವರು ತಮ್ಮ ಗುರುಗಳಾದ ಶ್ರೀ ಯಲ್ಲಪ್ಪ ತಾತಾನವರ ಹತ್ತಿರ ಲಿಂಗ ದಿಕ್ಷೆಯನ್ನು ಪಡೆದರು. ಅಂದಿನ ದಿವಸವೇ ಹೊಲದಿಂದ ನೇರವಾಗಿ ಅರಣ್ಯವನ್ನು ಹೊಕ್ಕು ಹಾಡುತ್ತ ನಡೆದರು. ನಡೆದ ದಾರಿಯೊಂದರ ಕಾಡಿನಲ್ಲಿರುವ ಮೈಲಾರ ಮಲ್ಲಣ್ಣನ ದರ್ಶನ ಪಡೆದರು. ಅಲ್ಲೆ ಸ್ನಾನ ಪೂಜೆ, ಧ್ಯಾನ, ಜಪ, ಮಾಡಿ ರಾತ್ರಿ ಮರಳಿ ಮನೆಗೆ ಬಂದರು. ಹೀಗೆ ಕೆಲವು ದಿವಸಗಳು ಪ್ರತಿದಿನಾ ಸಾಯಂಕಾಲ ಮನೆಯಿಂದ ಹೋಗಿ ಮೈಲಾರ ಮಲ್ಲಣ್ಣನ ದರ್ಶನ ಪಡೆದು ರಾತ್ರಿ ಮನೆಗೆ ಬರುತ್ತಿದ್ದರು. ಇಂತಹ ಸ್ಥಿತಿಯಲ್ಲಿಯೇ ಶ್ರೀ ವೀರಭದ್ರಪ್ಪ ಮತ್ತು ತಾಯಮ್ಮನವರಿಗೆ ಪರಮಾತ್ಮನು ಒಲಿದು ಈ ದಂಪತಿಗಳ ಚಿದ್ಗರ್ಭದಲ್ಲಿ ಸಂತಾನವೊಂದು ಉದ್ಭವಿಸಿತ್ತು. ಇದನ್ನು ಕಂಡು ಗ್ಯಾನಮ್ಮ ಮತ್ತು ಜೀತಪ್ಪನವರಿಗೆ ಎಲಿಲ್ಲದ ಸಂತೋಷವಾಯಿತು.

ಯರನಳ್ಳಿ ಗ್ರಾಮಕ್ಕೆ ಬೀಗರ ಮನೆಗೆ ಈ ಸುದ್ದಿಯನ್ನು ಹರಡಿದ್ದರು. ಅವರ ಮನೆಯಲ್ಲಿ ಎಲ್ಲರಿಗೂ ಸಂತೋಷವಾಗಿ ಅಂದಿನ ದಿವಸವೇ ನಾನಾ ರೀತಿಯ ತಿಂಡಿ ತಿನ್ನಿಸು ಕಟ್ಟಕೊಂಡು ಮಗಳನ್ನು ನೋಡಲು ಅಲಿಯಂಬರಕ್ಕೆ ಬಂದರು. ತಂದೆ ತಾಯಿಯವರನ್ನು ನೋಡಿದ ತಕ್ಷಣ ತಾಯಮ್ಮನವರಿಗೆ ಆನಂದವಾಯಿತು. ಹುಟ್ಟಿದ ಮಗುವಿಗೆ ಸಿದ್ಧಪ್ಪಾ ಎಂದು ನಾಮಕರಣ ಮಾಡಿದರು.

ಎತ್ತಣ ಮಾಮರ? ಎತ್ತಣ ಕೋಗಿಲೆ?
ಎತ್ತಣಿಂದೆತ್ತ ಸಂಬಂಧವಯ್ಯಾ ,
ಬೆಟ್ಟದ ನೆಲ್ಲಿಕಾಯಿ ಸಮುದ್ರದೊಳಗಣ ಉಪ್ಪು
ಎತ್ತಣಿದೆತ್ತ ಸಂಬಂಧವಯ್ಯಾ,
ವೀರಭದ್ರಪ್ಪನಿಗೂ ಗಾಯಮುಖಕ್ಕೂ ಎತ್ತಣದೆತ್ತ ಸಂಭಧವಯ್ಯಾ

ಮಾವಿನ ಗಿಡ ಒಂದು ಕಡೆ ಇರುತ್ತದೆ. ಅದರ ಮೇಲೆ ಎಲ್ಲಿಂದಲೊ ಬಂದ ಕೊಗಿಲೆ ಕುಳಿತುಕೊಳ್ಳುತ್ತದೆ. ಇವುಗಳ ಸಂಬಂಧವೇನು ? ಒಂದಕ್ಕೊಂದು ಕೊಡುವವು ಅಲ್ಲದೇ ನೆಲ್ಲಿಕಾಯಿಯ ಬೆಟ್ಟದ ಮೇಲೆ ಮರದಲ್ಲಿರುತ್ತದೆ. ಬೇರೆ ದೂರ ವಿರುವ ಸಮುದ್ರದಲ್ಲಿ ಉಪ್ಪು ಇರುತ್ತದೆ. ಇವೆರಡು ಕೂಡಿರುವುದು ಸಂಬಂಧವೆನು? ಎಂಬಂತೆ ಈ ಸಂಧರ್ಬದಲ್ಲಿ ವೀರಭದ್ರಪ್ಪನವರಿಗೂ ಗಾಯಮುಖದ ದರ್ಶನ ಪಡೆಯಲು ಅವಕಾಶ ಒದಗಿ ಬಂತು. ಅಲ್ಲದೇ ಶ್ರೀ ವೀರಭದ್ರಪ್ಪನವರು ಆ ಪವಿತ್ರ ಸ್ಥಳಕ್ಕೆ ಮನೋ ನಂಬಿಕೆಯಿಂದ ಕೂಡಿರುವುದು ವೈಚಾರಿಕ ವಿಷಯವಾಗಿವೆ.

ಗಾಯಮುಖದ ಸುಕ್ಷೇತ್ರ ಸ್ಥಳ ದಟ್ಟವಾದ ಅರಣ್ಯದಲ್ಲಿದೆ. ಬೆಟ್ಟ ಗುಡ್ಡಗಾಡು ಪ್ರದೇಶದಿಂದ ತುಂಬಿಕೊಂಡಿದೆ. ಅಲ್ಲಿ ಯಾರಾದರು ಒಬ್ಬರು ಹೋಗಲಾರರು ಏಕೆಂದರೆ ಅಂತಹ ಭಯ ಭೀತ್ತಿಯನ್ನು ಹುಟ್ಟಿಸುತ್ತದೆ. ಹಗಲಲಲ್ಲಿಯೇ. ಈ ರೀತಿಯಾಗಿ ಕಾಣುತ್ತಿರುವಾಗ ಈ ಸ್ಥಳದದಲ್ಲಿ ಶ್ರೀ ವೀರಭದ್ರಪ್ಪನವರು ರಾತ್ರಿ ಹನ್ನೆರಡು ಗಂಟೆಯ ಸಮಯಕ್ಕೆ ಒಬ್ಬರೆ ಹೂಗಿ, ಸ್ನಾನ ಪೂಜೆ ಜಪ ತಪ ಸಿದ್ಧ ಸಾಧನೆ ಮುಗಿಸಿಕೊಂಡು ರಾತ್ರಿ ಮನೆಗೆ ಮರಳಿ ಬರುತ್ತಿರುವುದು ಆಶ್ಚರ್ಯದ ಸಂಗತಯಾಗಿತ್ತು.

ಹಗಲೆಲ್ಲ ಕೆಲಸ ಮಾಡಿ ಸಾಯಂಕಾಲದಲ್ಲಿ ಭಜನೆಯ ಗುಂಪಿನಲ್ಲಿ ಕೂಡುತ್ತಿದ್ದರು. ರಾತ್ರಿ ಹನ್ನೆರಡು ಗಂಟೆಯಾದ ಬಳಿಕ ಎದ್ದು ನೇರವಾಗಿ ಮೈಲಾರ ಮಲ್ಲಣ್ಣನ ದರ್ಶನ ಪಡೆದು ಮುಂದೆ ಗಾಯ ಮುಖಕ್ಕೆ ಹೋಗಿ ಸ್ನಾನ ಪೂಜೆ ಮುಗಿಸಿಕೊಂಡು ಮನೆಗೆ ಬರುತ್ತಿದ್ದರು. ಹೀಗೆ ಹಲವಾರು ದಿವಸಗಳು ನಡೆದವು. ಆ ಅಲಿಯಂಬರದಲ್ಲಿ ಕೆಲವು ಜನರಿಗೆ ಆಶ್ಚರ್ಯವಾಗಿ ಈ ವೀರಭದ್ರಪ್ಪ ದಿನ ರಾತ್ರಿ ಎಲ್ಲಿಗೆ ಹೋಗುತ್ತಾನೆ ? ಇವತ್ತು ನೋಡೋಣವೆಂದು ಪಣತೊಟ್ಟರು ಎಂದಿನಂತೆ ವೀರಭದ್ರಪಸನವರು ಹನ್ನೇರಡು ಗಂಟೆಗೆ ಭಜನ ಮಂಡಳಿಯಿಂದ ಎದ್ದು ನೇರವಾಗಿ. ಅವರು ತಮ್ಮ ದಾರಿಯನ್ನು ಹಿಡಿದರು. ಆ ಊರ ಜನರು ಅವರ ಹಿಂದೆ, ಹಿಂದೆ ಹಿಂಬಾಲಿಸಿದರು. ಮುಂದೆ ಮುಂದೆ ವೀರಭದ್ರಪ್ಪ ಹಿಂದೆ, ಹಿಂದೆ ಊರ ಜನರು ತುಂಬಿದ ಹುಣ್ಣಿಮೆಯ ಬೆಳದಿಂಗಳ ಹಿಟ್ಟು ಚೆಲ್ಲಿದಂತಿತ್ತು . ವೀರಭದ್ರಪಪ್ಪನವರು ಹಾಡುತ್ತ ದಟ್ಟವಾದ ಅರಣ್ಯದೊಳಗ ಹೊಕ್ಕರು. ಅವರ ಹಿಂದೆ ಅಜುತ್ತಾ ಅಂಜುತ್ತಾ ಮೆಲ್ಲಗೆ ಜನರು ಬೆನ್ನು ಹತ್ತಿದ್ದರು. ದಟ್ಟವಾದ ಅರಣ್ಯದ ಮಧ್ಯದಲ್ಲಿ ಆ ಜನರ ಎದುರಿಗೆ ಹುಲಿಯು ಬಂದು ನಿಂತ್ತಿತು ಗರ್ಜಸುತಿತ್ತು . ಆ ಹುಲಿಯನ್ನು ನೋಡಿದ ತಕ್ಷಣ ಆ ಜನರ ಹೃದಯ ಒಡೆದು ನೀರಾಯಿತು. ಎಲ್ಲರೂ ಅಂಜಿದರು ಏ ವೀರಭದ್ರಪ್ಪ ಎಂದು ಗಟ್ಟಿಯಾಗಿ ಕೂಗಿದ್ದರು. ಆಗ ವೀರಭದ್ರಪ್ಪ ಹಿಂದಕ್ಕೆ ತಿರುಗಿ ನೋಡಿದ್ದಾಗ ಅವರ ಊರಭಜನ ಮಂಡಳಿಯ ಜನರಿದ್ದರು. ಏಕೆ ಬರುತ್ತಿದ್ದಿರಿ? ನೀವು ಎಂದು ಕೇಳಿದರು.

ಅದಕ್ಕೆ ಆ ಜನರು ಏ ವೀರಭದ್ರಪ್ಪ ಮೊದಲು ನಮಗೆ ಬದುಕಿಸು ಆ ಮೇಲೆ ಹೇಳುತ್ತೇವೆ. ನಮ್ಮ ಎದುರಿಗಿರುವ ಹುಲಿ ನಮಗೆ ಬಿಡುವುದಿಲ್ಲ. ಅದ್ದರಿಂದ ನೀನೆ ನಮಗೆ ರಕ್ಷಿಸಬೇಕು ಎಂದು ಕಳ ಕಳಿಯಿಂದ ಕೇಳಿಕೊಂಡರು.

ಆಗ ಶ್ರೀ ವೀರಭದ್ರಪ್ಪನವರು ಹಿಂದಕ್ಕೆ ಬಂದು ಹುಲಿಯನ್ನು ಬಾ, ಬಾ ಎಂದು ಕರೆದರು. ಮಾತನಾಡಿಸುವ ಆತ್ಮೀಯವಾದ ಧ್ವನಿ ಆಲಿಸಿ ಹುಲಿ ಮರೆಯಾಗಿ ನಿಮಗೇನೂ ಮಾಡುವುದಿಲ್ಲಿ ಹಿಂದುರುಗಿ. ಊರಿಗೆ ಹೋಗಿರೆಂದು ವೀರಭದ್ರಪ್ಪನವರು ಹೇಳಿದರು ಆಗ ಆ ಎಲ್ಲಾ ವ್ಯಕ್ತಿಗಗಳು ಬಂದು ವೀರಭದ್ರಪ್ಪನವರಿಗೆ ಕೈಮುಗಿದು ಮರುದಿವಸ ಬೆಳಿಗ್ಗೆ ಈ ವಿಷಯವನ್ನೆಲ್ಲ ಊರ ತುಂಬಾ ಹರಡಿಸಿದರು.

ಅನುಷ್ಠಾನ ಮತ್ತು ಪವಾಡಗಳಲ್ಲಿ ಶ್ರೀಗಳ ದರ್ಶನ

**ಪಾಪನಾಶ**

ಶ್ರೀ ವೀರಭದ್ರಪ್ಪನವರು ಒಮ್ಮೆ ಬೀದರ ನಗರದಲ್ಲಿರುವ ಪ್ರಶಾಂತ ಹಾಗೂ ಪವಿತ್ರ ಸ್ಥಳವಾದ "ಪಾಪನಾಶ" ಕ್ಷೇತ್ರದಲ್ಲಿ ಅನುಷ್ಠಾನ ಕೂಡಬೇಕೆಂದು ಮನಸ್ಸು ಮೂಡಿ ಬಂತು ಅದಕ್ಕೆ ಅವರು ಆ ಸ್ಥಳದಲ್ಲಿ ಅನುಷ್ಠಾನ ಕೂಡಲು ನಿರ್ಧರಿಸಿ ಕುಳಿತುಕೊಂಡರು. ಅವರು ಅನುಷ್ಠಾನ ಕೂಡುವ ಸಮಯ ಯಾವ ಜನರಿಗೂ ಗೊತ್ತಿರಲಿಲ್ಲ. ಅಂದು ಪಾಪನಾಶ ಮಂದಿರುವು ಇಷ್ಟೋಂದು ಭವ್ಯವಾಗಿರಲಿಲ್ಲ. ಕೇವಲ ನಾಲ್ಕು ಫೋಟು ಕಲ್ಲಿನಿಂದ ಕಟ್ಟಡ ಕಟ್ಟಿ ಮೇಲೆ ಸ್ಥಾವರ ಲಿಂಗ ಮಾತ್ರ ಇತ್ತೆಂದು ತಿಳಿದುಬಂದಿದೆ. ಈ ಇಷ್ಟ ಲಿಂಗದ ಸುತ್ತಮುತ್ತ ಗಿಡಗಂಟಿ ದಟ್ಟವಾಗಿ ಬೆಳೆದಿದ್ದವು. ಅಲ್ಲಿಗೆ ಹೋಗುವವರಿಗೆ ಭಯವನ್ನು ಹುಟ್ಟಿಸುವಂತಿತ್ತು, ಅಲ್ಲದೇ ಕೆಲವೇ ಜನರಿಗೆ ಮಾತ್ರ ಈ ಸ್ಥಳದ ಪರಿಚಯವಿತ್ತು. ಉಳಿದ ಜನರಿಗೆ ಪಾಪನಾಶವಿದೆ ಎಂದು ಅರಿವಿರಲಿಲ್ಲ.

ವೀರಭದ್ರಪ್ಪನವರು ಅನುಷ್ಠಾನ ಕುಳಿತುಕೊಂಡ ಸಂದ್ದಿಯು ನಾನಾ ಕಡೆ ವ್ಯಾಪಿಸಿತು. ಈ ಸುದ್ದಿಯನ್ನು ಕೇಳಿದ ತಕ್ಷಣ ಜನರು ಶ್ರೀ ಅಪ್ಪನವರ ದರ್ಶನಕ್ಕೆಂದು ಧಾವಿಸಿ ಬರುತ್ತಿದ್ದರು. ನಾನಾ ಕಡೆಯಿಂದ ಬಂದ ಜನರು ಶ್ರೀ ಅಪ್ಪಗಳ ದರ್ಶನ ಪಡೆದು ನಂತರವೆ ಇಲ್ಲೊಂದು ಪಾಪನಾಶ ಲಿಂಗವಿದೆ ಎಂದು ಜನರಿಗೆ ಗೊತ್ತಾಯಿತು. ಸತತ ಮೂರು ತಿಂಗಳು ಅನುಷ್ಠಾನಗೈದ ಶ್ರೀ ವೀರಭದ್ರಪ್ಪನವರು ಮುಕ್ತಾಯದ ಸಮಾರಂಭಕ್ಕೆ ಅವರ ಭಕ್ತರು ಜಾತ್ರೆ ಮಾಡಿದರು. ಹಲವಾರು ಹಳ್ಳಿ ಪಟ್ಟಣಗಳಿಂದ ಜನರು ನೆರೆದರು. ಅಂದು ಎಲ್ಲಾ ಜನರಿಗೆ ಮಹಾ ಪ್ರಸಾದದ ವ್ಯವಸ್ಥೆ ಮಾಡಿದರು. ಈ ವಿಷಯವನ್ನು ತಿಳಿದು ಬೀದರದಲ್ಲಿಯ ಕೂಲಿ – ನಾಲಿ ಮಾಡುವ ಬಡಬಗ್ಗ ಜನರು ಸರಮಾಲೆಯಂತೆ ಬರತೊಡಗಿದರು. ಎಲ್ಲಾ ಜನರಿಗೆ ಪ್ರಸಾದ ವ್ಯವಸ್ಥೆಯನ್ನು ಮಾಡುತ್ತಿರುವುದರಿಂದ ಕೂನೆಗೆ ಪ್ರಸಾದವು ಕಡಿಮೆ ಬೀಳುವ ಪ್ರಸಂಗ ಬಂತು. ಇನ್ನೂ ಬರುವ ಜನರು ಬರುತ್ತಲೇ ಇದ್ದರು. ಇದನ್ನು ಕಂಡು ಪ್ರಸಾದ ವ್ಯವಸ್ಥಾಪಕರು ನೇರವಾಗಿ ಅಪ್ಪಗಳ ಕಡೆ ಬಂದು ವಿಷಯ ತಿಳಿಸಿದರು. ಆಗ ಅಪ್ಪನವರು ಮಹಾ ಪ್ರಸಾದದ ಕಡೆಗೆ ಬಂದು ನೋಡಿ, ಹುಗ್ಗಿ ಹಾಗೂ ಅನ್ನದ ಕಡಾಯಿಗಳ ಮೇಲೆ ತಮ್ಮಲ್ಲಿಯೆಯಿರುವ ಒಂದು ಕರಿಯ ಪಾವುಡವನ್ನು ಹಾಕಿ ಪ್ರಸಾದ ಮುಚ್ಚಿದರು. ಮುಂದೆ ಮಹಾ ಪ್ರಸಾದದ ವ್ಯವಸ್ಥೆ ಮಾಡುವವರಿಗೆ ಆ ಪಾವುಡ ತೆಗೆಯ ಬೇಡ ಪಾವುಡ ಒಳಗೆ ಕೈ ಹಾಕಿ ಪ್ರಸಾದವನ್ನು 'ದತ್ತ, ದತ್ತ' ಎನ್ನುತ್ತ ತೆಗೆದುಕೊಡಬೇಕು ಎಂದು ತಿಳಿಸಿ ಹೇಳಿದರು. ಆಗ ಅಪ್ಪನವರು ಹೇಳಿದಂತೆ ವ್ಯವಸ್ಥಾಪಕರು ಪಾವುಡ ಒಳಗೆ ಕೈ ಹಾಕಿ ಮಹಾ ಪ್ರಸಾದವನ್ನು ತೆಗೆದು ಕೊಡಲು ಪ್ರಾರಂಭಿಸಿದರು.

ಮುಂದೆ ಸಾವಿರಾರು ಭಕ್ತ ಜನರು ಪ್ರಸಾದ ಸ್ವೀಕರಿಸಿದರು. ಕಡಿಮೆ ಬಿಳಲೀಲ್ಲ. ಇದು ಆಶ್ಚರ್ಯವನ್ನುಂಟು ಮಾಡಿತು. ಅಂದಿನ ಸಮಯದಲ್ಲಿ ಊಟದಲ್ಲಿ ತುಪ್ಪವನ್ನು ನೀಡುವ ನಿಯಮದ ವ್ಯವಸ್ಥೆಯಿತ್ತು. ಅಂದು ಮಹಾ ಪ್ರಸಾದದಲ್ಲಿ ತುಪ್ಪ ನೀಡುತ್ತಿರುವ ಸಮಯದಲ್ಲಿ ಭಕ್ತ ಜನರು ಮಹಾ ಪ್ರಸಾದ ತೆಗೆದುಕೊಂಡು ಹೋಗುತ್ತಿದ್ದಾಗ, ತುಪ್ಪ ಕಡಿಮೆ ಬಿತ್ತು. ಆಗ ತುಪ್ಪ ನೀಡುವವನ್ನು ನೇರವಾಗಿ ಅಪ್ಪರಿರುವ ಸ್ಥಳಕ್ಕೆ ಧಾವಿಸಿ ಅಪ್ಪ ತುಪ್ಪ ಮುಗಿದಿದೆ ಎಂದು ಹೇಳಿದನು. ಆಗ ಅಪ್ಪನವರು ಅಲ್ಲಿ ಇನ್ನೂ ಎರಡು ತುಂಬಿದ ಡಬ್ಬಿಗಳಿವೆ ತೆಗೆದುಕೊಂಡು ಹೋಗು ಎಂದರು. ಆಗ ಅವನು ಎಲ್ಲಾ ತುಪ್ಪಗಳ ಡಬ್ಬಿಗಳು ನಾನೆ ಖಾಲಿ ಮಾಡಿಟ್ಟದ್ದೇನೆ. ಅವು ಖಾಲಿ ಡಬ್ಬಿಗಳಿವೆ ಎಂದನು. ಅಪ್ಪನವರು ನೀನು ಖಾಲಿ ಮಾಡಿದ ಡಬ್ಬಿ ಯಾವ ಕಡೆ ಇಟ್ಟದ್ದಿ ನಿನಗೆ ಗೊತ್ತಿಲ್ಲ. ಇವು ತುಪ್ಪ ತುಂಬಿದ ಡಬ್ಬಿಗಳು ತೆಗೆದುಕೊಂಡು ಹೋಗಿ ನೀಡು ಎಂದು ಅಪ್ಪಣೆ ಕೊಟ್ಟರು. ಆಗ ತುಪ್ಪ ನೀಡುವವನು ಆ ಖಾಲಿಯಾದ ಡಬ್ಬಿಯ ಕಡೆಗೆ ಬಂದು ನೋಡಿದಾಗ ಮತ್ತೆ ಪೂರ್ತಿಯಾಗಿ ತುಂಬಿದ ಡಬ್ಬಿಯನ್ನು ನೋಡಿ ಆಶ್ಚರ್ಯವಾಯಿತು. ಎದರು ಮಾತನಾಡದೇ ಆ ತುಪ್ಪದ ಡಬ್ಬಿಗಳನ್ನು ತೆಗೆದುಕೂಂಡು ಜನರಿಗೆ ತುಪ್ಪ ನೀಡದನು. ಕಡಿಮೆ ಬೀಳಲಿಲ್ಲ. ಇದು ವೀರಭದ್ರಪ್ಪನವರ ಪವಾಡವೆಂದು ಬಲ್ಲವರು ತಿಳಿದುಕೊಂಡು ತಮ್ಮ-ತಮ್ಮಲ್ಲಿಯೆ ಮಾತನಾಡಿಕೊಳ್ಳುತ್ತಿದ್ದರು.

ಮೈಲಾರ

೧೯೩೭ ರಲ್ಲಿ ಬೀದರ ತಾಲ್ಲೂಕಿನ ಮೈಲಾರ ಗ್ರಾಮದಲ್ಲಿ ಗಿಡ ಗಂಟಿ, ಪೊದೆಗಳು, ಗವಿಗಳ ಹತ್ತಿರ ವಿರುವ ಮಲ್ಲಣ್ಣನ ಮಂದಿರವೊಂದಿದೆ. ಅದು ಮೊದಲು ಅಷ್ಟೊಂದು ಬೆಳಕಿಗೆ ಬಂದಿರಲಿಲ್ಲ. ಶ್ರೀ ವೀರಭದ್ರಪ್ಪನವರು ಆ ಮೈಲಾರ ಮಲ್ಲಣ್ಣನ ದರ್ಶನ ಪಡೆದು, ಅಲ್ಲಿ ಅನುಷ್ಠಾನ ಮಾಡುಲು ಕುಳಿತು ಕೊಂಡರು. ಈ ವಿಷಯವನ್ನು ತಿಳಿದ ವೀರಭದ್ರಪ್ಪನವರ ಭಕ್ತರ ಬಳಗವು ನಾನಾ ಕಡೆಯಿಂದ ಬರತೊಡಗಿತು. ಸುಮಾರು ೧೦೧ ನೇ ದಿವಸದ ಅನುಷ್ಠಾನದ ಕೊನೆಯ ದಿವಸಕ್ಕೆ ಖಾಂಡ ಮಾಡಬೇಕೆಂದು ನಿರ್ಧರಿಸಿದರು. ಅವರ ಭಕ್ತರೆಲ್ಲ ಸಕ್ಕರೆ ಬ್ಯಾಳಿ ಪ್ರತಿಯೊಬ್ಬರು ತಮ್ಮ ತಮ್ಮಗೆ ಅನೂಕೂಲವಾಗಿರುವಂತೆ ದವಸ ಧಾನ್ಯಗಳನ್ನು ತಂದು ಕೊಟ್ಟರು. ಅಂದು ೧೦೮ ಕಡಾಯಿ ಹುಗ್ಗಿಯನ್ನು ಮಾಡಿದರು. ನಾನಾ ಕಡೆಯಿಂದ ಭಕ್ತಾದಿಗಳು ಬಂದರು.

ಮೈಲಾರ ಮಲ್ಲಣ್ಣನ ಗುಡಿಯ ಹತ್ತಿರ ದೊಡ್ಡ ದೊಡ್ಡದಾದ ಅರಳೆಯ ಮರಗಳಿದ್ದವು. ಅದಕ್ಕೆ ದೊಡ್ಡ ದೊಡ್ಡ ಕುದರೆಯ ಜೇನಿನ ನೋಣಗಳು ತಮ್ಮ ಗೂಡು ಕಟ್ಟಿಕೂಂಡಿದ್ದವು. ಇಲ್ಲೆ ಹುಗ್ಗಿ ಮತ್ತು ಅನ್ನ ಮಾಡಲಾಗುತ್ತದೆ. ಒಂದು ವೇಳೆ ಅವುಗಳು ಬಂದು ನಮ್ಮನ್ನು ಕಚ್ಚಬಹುದು ಎಂದು ಹೆದರಿ ಶ್ರೀ ವೀರಭದ್ರಪ್ಪನವರಿಗೆ ತಿಳಿಸಿದರು.

ಆಗ ಶ್ರೀ ವೀರಭದ್ರಪ್ಪನವರು ಬಂದು ಆ ಜೇನಿನ ನೋಣಗಳನ್ನು ನೋಡಿ ಅವುಗಳಿಗೆ ಹೀಗೆ ಹೇಳಿದರು. "ನೋಡ್ರಪ್ಪ ನಮ್ಮ ಜನರು ಹೇದರುತ್ತಿದ್ದಾರೆ. ಅವರು ಇಲ್ಲಿ ಜಾತ್ರ ಮಾಡುತ್ತಿದ್ದಾರೆ..ಅದಕ್ಕೆ ನಿಮ್ಮ ನಿಮ್ಮ ನೆಂಟರ ಮನೆಗೆ ಹೋಗಿರಿ ನಾವು ನಿಮ್ಮ ಮನೆಗೆ ಏನು ಮಾಡುವುದಿಲ್ಲ ನಾವು ಹೋದ ಮೇಲೆ ಮತ್ತೆ ನೀವು ಬಂದು ನಿಮ್ಮ ಮನೆ ಸೇರಬಹುದು "ಎಂದು ಶ್ರೀ ವೀರಭದ್ರಪ್ಪನವರು ಕೈಮುಗಿದು ನಮಸ್ಕರಿಸಿ ಹೇಳಿದರು.

ಅಪ್ಪನವರ ವಾಣಿಯನ್ನು ಕೇಳಿದ ಆ ನೊಣಗಳು ಬರ್ರನೆ ಒಂದೊಂದಾಗಿ ಎದ್ದು ಹೋದವು ಆಗ ಜನರು  ನಿರ್ಭಯವಾಗಿ ಖಾಂಡನ್ನು ಮಾಡಿ ಮುಗಿಸಿದರು. ಮರುದಿವಸ ಮತ್ತೆ ಆ ಜೇನು ನೊಣಗಳು ತಮ್ಮ ತಮ್ಮ ಗೂಡನ್ನು ಸೇರಿದವು. ಇದು ಅಪ್ಪನವರ ಸಿದ್ಧ ಸಾಧನೆ ತಪ್ಪಸ್ಸಿನ ಫಲಗಳೇ ಕಾರಣ ಅಂದಿನಿಂದ ಶ್ರೀಗಳು ಜನರಿಗೆ ಪಂಚಪ್ರಾಣವಾದರು ಎಲ್ಲೆಲ್ಲಿಂದಲೂ  ಜನರು ಶ್ರೀಗಳ ದರ್ಶನಕ್ಕೆ ಧಾವಿಸಿ ಬರುತ್ತಿದ್ದರು.

ಶ್ರೀ ವೀರಭದ್ರಪ್ಪನವರು ಜೇಷ್ಠ ಸುಪುತ್ರನಾದ ಸಿದ್ಧಪ್ಪನವರು ಹೃದಯ ರೋಗದಿಂದ ಒಳಗೊಳಗೆ ಕೊರಗುತ್ತಿದ್ದರು. ಮಗನ ಈ ಗಂಭೀರ ಪರಿಸ್ಥಿತಿ ಮನವರಿಕೆ ಮಾಡಿಕೊಂಡ ಶ್ರೀ ವೀರಭದ್ರಪ್ಪನವರಿಗೆ ಸಮಸ್ಯೆಯಾಗಿತ್ತು. ಸುಮಾರು ಎರಡು ವರ್ಷಗಳ  ಕಾಲ ಹಾಗೆಯೇ ಇದ್ದರು. ಮಗನ ರೋಗ ಕಡಿಮೆಯಾಗಲಿಲ್ಲ. ಈ ಪರಿಸ್ಥಿತಿಯನ್ನು ಕಂಡು ಶ್ರೀ ವೀರಭದ್ರಪ್ಪನವರು ಮಗನಿಗೆ ಕರೆದುಕೊಂಡು ನೇರವಾಗಿ ಘಾಣಗಾಪುರ ದತ್ತಾತ್ರೇಯ ದರ್ಶನ ಪಡೆಯಲು ಹೋದರು. ದತಾತ್ರೇಯ ದರ್ಶನ ಪಡೆದು ಅಲ್ಲಿ ಹನ್ನೊಂದು ದಿವಸಗಳು ಸತತ ಅನುಷ್ಠಾನ ಕುಳಿತುಕೊಂಡರು. ಮಗ ಸಿದ್ಧಪ್ಪನು ಸಹ  ಅಲ್ಲಿಯೇ ತಂದೆಯ ಜೊತೆಗೆ ಕುಳಿತುಕೊಂಡನು.  ಹನ್ನೊಂದು ದಿವಸ ಅನುಷ್ಠಾನ ಮುಗಿಯಲವುದರೊಳಗೆ ಮಗನಾದ ಸಿದ್ಧಪ್ಪನ ಹೃದಯ ರೋಗವು ಕಡಿಮೆಯಾಯಿತು.  ಆಗ ಶ್ರೀ ವೀರಭದ್ರಪ್ಪನವರು ಎದ್ದು ದತ್ತಾತ್ರೆಯ ದರ್ಶನ ಪಡೆದು ಮಗನನ್ನು ಕರೆದು ಕೊಂಡು ಅಲಿಯಂಬರ ಗ್ರಾಮಕ್ಕೆ ಬಂದರು.

ನಿಂಬೂರು ಗ್ರಾಮದಲ್ಲಿ

ಒಂದು ದಿವಸ ಶ್ರೀ ವಿರಭದ್ರಪ್ಪನವರು ಶಿಷ್ಯರ ಜೊತೆಗೆ ನಿಂಬೂರಿಗೆ ಹೋಗುತ್ತಿದ್ದರು. ದಾರಿಯ ನಡುವೆ ಇರುವ ಬಾಳೂರ ಗ್ರಾಮದಲ್ಲಿ  ಮಲ್ಲಣ್ಣನ ಮಂದಿರದ ಹತ್ತಿರ ಏನೋ ಶಬ್ದ ಕೇಳಿ ಬಂದಂತಾಗಿ ಅಪ್ಪನವರು ಅಲ್ಲೆ ನಿಂತು ಆ ಶಬ್ಬ ಕೇಳಿದರು. ಅಲ್ಲಿ "ಏಕತಾರಿ" ಭಜನೆಯ ಧ್ವನಿ ಕೇಳಿ ಬರುತ್ತಿತು. ಅದಕ್ಕೆ ಅಪ್ಪನವರು ಮುಂದಕ್ಕೆ ನಡೆಯುವುದುನ್ನು ಬಿಟ್ಟು ಆ ಮಂದಿರದ ಕಡೆಗೆ ದಾರಿಯನ್ನು ಹಿಡಿದರು. ಅವರ ಶಿಷ್ಯ ಮಕ್ಕಳು ಅಪ್ಪ ! ಆ ಕಡೆ ಎಲ್ಲಿಗೆ ? ದಾರಿ ಈ ಕಡೆ ಇದೆ ಎಂದು ಹೇಳಿದರು. ಆಗ ಅಪ್ಪನವರು ನೀವು ಸುಮ್ಮನೆ ಬನ್ನಿರಿ, ಇಲ್ಲಿ ಮಂದಿರದ ಹತ್ತಿರ ಏಕತಾರಿ ಭಜನೆ ನಡೆಯುತ್ತಿದೆ. ಅದಕ್ಕೆ ಅಲ್ಲಿಗೆ ಹೋಗಿ ಬರೋಣವೆಂದು ಅಪ್ಪನವರು ಅವರಿಗೆ ಹೇಳಿದರು. ಶ್ರೀ ವೀರಭದ್ರಪ್ಪನವರು ಮಲ್ಲಣ್ಣನ ಮಂದಿರದ ಹತ್ತಿರ ಬಂದು ನೊಡಿದಾಗ ಯಾರೂ ಇರಲಿಲ್ಲ. ಏಕತಾರಿಯ ಧ್ವನಿಯು ಮಾತ್ರ ಕೇಳಿ ಬರುತ್ತಿತ್ತು. ಆಗ ಅಪ್ಪನವರು ಇದೊಂದು ಒಳ್ಳೆಯ ಸುಕ್ಷೇತ್ರ ಸ್ಥಳವೆಂದು ಜನರಿಗೆ ಶಿಷ್ಯ ಮಕ್ಕಳಿಗೆ ಹೇಳಿದರು.

ಶ್ರೀಗಳ ಮನಸ್ಸಿನಂತೆ ಆ ಸ್ಥಳದಲ್ಲಿ  ಅನುಷ್ಠಾನ ಕೂಡಬೇಕೆಂದು ನಿರ್ಧರಿಸಿದರು. ಆದ್ದರಿಂದ ಅವರು  ಅಲ್ಲಿಯ ಮಲ್ಲಣ್ಣನ ಗುಡಿಯ ಹತ್ತಿರ ಸುಮಾರು ನಲವತ್ತೊಂದು ದಿವಸ ಅನುಷ್ಠಾನವನ್ನು ಕುಳಿತುಕೊಂಡರು.  ಆ ಸಮಯಕ್ಕೆ ಬಾಳೂರ ಗ್ರಾಮದ ಜನರಿಗೂ, ಅರಿವಾಗಿ ಅವರು ಹಗಲಿರುಳು ಆ ಮಂದಿರದಲ್ಲಿಯೇ ಇರುತ್ತಿದ್ದರು.  ಅಪ್ಪನವರು ಎಂದರೆ ಬಾಳೂರ ಗ್ರಾಮದ ಹಿಂದಿನ  ಹಿರಿಯರಿಗೆ ಎಲ್ಲಿಲದ ಸಂತೋಷವಿತ್ತೆಂದು ಹೇಳಬಹುದು. ಅಪ್ಪನವರು ನಲವತ್ತೊಂದು ದಿವಸ ಆ ಮಲ್ಲಣ್ಣನ ಗುಡಿಯ ಹತ್ತಿರ ಅನುಷ್ಠಾನ ಕುಳಿತುಕೊಂಡಾಗ ಬಾಳೂರ ಗ್ರಾಮದ ಜನರು ಅಲ್ಲಿಯೇ ಭಜನೆಯನ್ನು ಮಾಡಲು ಪ್ರಾರಂಭ ಮಾಡಿದರು. ಅಪ್ಪನವರ ಅನುಮತಿಯ ಮೇರೆಗೆ  ಅನುಷ್ಠಾನ ಮುಕ್ತಾಯದ ಸಮಾರಂಭಕ್ಕೆ ಆಮಂತ್ರಣ ಪ್ರತಿಕೆಯನ್ನು ನಾನಾ ಕಡೆ ಹಂಚಿದರು. ಹಳ್ಳಿ ಪಟ್ಟಣಗಳಿಂದ  ಹಲವಾರು ಜನರು ಬಂದರು.

ಈ ಕಾರ್ಯಕ್ರಮಕ್ಕೆ ಬಂದ ಎಲ್ಲಾ ಅತಿಥಿಗಳಿಗೆ ಮಹಾ ಪ್ರಸಾದದ ವ್ಯವಸ್ಥೆಯನ್ನು ಮಾಡಿದರು. ಎರಡು ದಿವಸಗಳು ಹಗಲು ರಾತ್ರಿ ಬಂದ ಎಲ್ಲಾ ಶರಣ ಶರಣೆಯರಿಗೂ ಉಚಿತ ಪ್ರಸಾದವನ್ನು ಏರ್ಪಡಿಸಿದರು. ಅತ್ಯಂತ ವಿಜ್ರಂಭಣೆಯಿಂದ ಅನುಷ್ಠಾನ ಮುಕ್ತಾಯ ಕಾರ್ಯಕ್ರಮವನ್ನು ಜರುಗಿಸಿದರು.

ಆಲೂರು ಗ್ರಾಮದಲ್ಲಿ

ಆಲೂರು ಗ್ರಾಮದಲ್ಲಿ ಒಂದು ಸು-ಸಂಸ್ಕೃತ ಮನೆತನದ ಶರಣ ದಂಪಂತಿಗಳು ಅತ್ಯಂತ ಶ್ರೀಮಂತರಾಗಿದ್ದರು. ಅದರೆ ಅವರಿಗೆ ಮಕ್ಕಳಿರಲಿಲ್ಲವೆಂದು ಆಷ್ಟೇ ದುಃಖದ ಸಾಗರದಲ್ಲಿ ಮುಳಗಿದರು. ಅವರು ಎಲ್ಲಾ ಕಡೆ ದವಾಖಾನೆ ತಿರುಗಿ ಬಂದರೂ ಮಕ್ಕಳಾಗಲಿಲ್ಲ. ಮಂತ್ರ – ತಂತ್ರ ಮೊದಲಾದವುಗಳು ಮುಗಿದಿದ್ದರೂ ಪ್ರಯೋಜನವಾಗಲ್ಲಿಲ. ಕೊನೆಗೆ ಸೋತು ಸುಮ್ಮನೆ ದುಃಖದಿಂದ ಮನೆಯಲ್ಲಿಯೇ ಕುಳಿತು ಕೊಂಡರು.

ಕೆಲವು ದಿವಸಗಳ ನಂತರ ಒಬ್ಬ ವ್ಯಕ್ತಿ ಬಂದು ನೀವು ಶ್ರೀ ವೀರಭದ್ರಪ್ಪನವರ ಕಡೆಗೆ ಹೋದರೆ ನಿಮ್ಮ ಬೇಡಿಕೆ ಈಡೆರುತ್ತದೆಂದು ಹೇಳಿದನು. ಅವನ ಮಾತನ್ನು ಕೇಳಿ ಆ ಶರಣ ದಂಪತಿಗಳಿಬ್ಬರು ನೇರವಾಗಿ ಹಳೆಂಬರ ಗ್ರಾಮಕ್ಕೆ ಬಂದು ವೀರಭದ್ರಪನವರ ದರ್ಶನ ಪಡೆದರು. ನಂತರ ತಮ್ಮ ಮನದಾಸೆಯ ಭಾವನೆ (ಸಂತಾನ) ವ್ಯಕ್ತಪಡಿಸಿದರು. ಅಲ್ಲದೇ ನಮಗೆ ಸಂತಾನವಾದರೆ ನಿಮ್ಮ ಹೆಸರಿನ ಮೇಲೆ ತೊಟ್ಟಿಲ ಕಾರ್ಯಕ್ರಮಕ್ಕೆ ಎಲ್ಲಾ ಅತಿಥಿಗಳಿಗೆ ತುಪ್ಪದಿಂದ ಕೈಯನ್ನು ತೊಳಿಸುತ್ತೇನೆಂದು ಶರಗೊಡ್ಡಿ ಬೇಡಿಕೊಂಡು ಹರಕೆಯನ್ನು ಮಾಡಿದಳು. ಆಗ ಅಪ್ಪನವರು ಸಮ್ಮನೆ ಕುಳಿತರು.

ಅಂದಿನ ರಾತ್ರಿ ಶರಣ ದಂಪತಿಗಳು ಮನೆಗೆ ಹೋಗಿ, ಮಲಗಿದ ಮೇಲೆ ಅವಳಿಗೊಂದು ಕನಸು ಬಿದ್ದಿತ್ತು. ಕನಸಿನಲ್ಲಿ "ಮಗು ಹುಟ್ಟುತ್ತದೆ." ಎಂದು ವೀರಭದ್ರಪ್ಪನವರು ಹೇಳಿದರು. ಆಗ ಅವಳು ಗಂಡನನ್ನು ಎಬ್ಬಿಸಿ "ರಿ ನನಗೊಂದು ಕನಸು ಬಿತ್ರಿ ! ನಮಗೆ ಮಗಾ ಹುಟ್ಟುತ್ತಾನಂತೆ ಎಂದು ಸಂತೋಷದಿಂದ ಗಂಡನಿಗೆ ಹೇಳಿದಳು. ಹೆಂಡತಿಯ ಮಾತನ್ನು ಕೇಳಿ ಗಂಡನಿಗೂ ಆನಂದವಾಯಿತು.

ಒಂಬತ್ತು ತಿಂಗಳು ಪೂರ್ತಿದಿನ ತುಂಬಿದ ಮೇಲೆ ಅವಳಿಗೊಂದು ಗಂಡು ಮಗು ಹುಟ್ಟಿತು. ಆ ಮಗುವು ಸುಂದರ ಲಕ್ಷಣವುಳ್ಳದ್ದಾಗಿತ್ತು. ಹನ್ನೆರಡನೆ ದಿವಸಕ್ಕೆ ವೀರಭದ್ರಪ್ಪನವರನ್ನು ಕರೆಯಿಸಿ ತೊಟ್ಟಿಲ ಕಾರ್ಯಕ್ರಮ ಇಡಬೇಕೆಂದು ನಿರ್ಧರಿಸಿ ಶ್ರೀಗಳ ಕಡೆಗೆ ಕೇಳಲು ಬಂದರು. ಆಗ ಅಪ್ಪನವರು ನನಗೆ ಬರಲಿಕ್ಕೆ ಆಗುವುದಿಲ್ಲವೆಂದು ಹೇಳಿ ಕಳುಹಿಸಿದರು. ಆ ಶರಣ ದಂಪತಿಗಳು ಮಗುವಿನ ನಾಮಕರಣ ಮುಂದಕ್ಕೆ ಹಾಕಿದರು. ಹೀಗೆ ನಾಲ್ಕಾರು ಸಲ ಶ್ರೀಗಳಿಗೆ ಕೇಳಿದರೂ ಶ್ರೀಗಳು ಒಪ್ಪಲಿಲ್ಲ, ಮಗುವಿಗೆ ಸುಮಾರು ಎರಡುವರೆ ವರ್ಷ ತುಂಬಿದವು. ಹೀಗೆ ಶರಣ ದಂಪತಿಗಳು ಬಂದು ಅಪ್ಪನವರೆ ನೀವು ಬಂದು ನಮ್ಮ ಮಗನಿಗೆ ನಾಮಕರಣ ಮಾಡದೇ ಹೋದರೆ ನಾವು ಸಹ ಮಾಡುವುದಿಲ್ಲ ಇದು ಸತ್ಯ ಎಂಬುವದಾಗಿ ದುಃಖವನ್ನು ವ್ಯಕ್ತಪಡಿಸಿದರು. ಅಂದಿನ ಮರುದಿವಸವೆ ದಿನ ವಾರ ನೊಡಲಾರದೇ ಶ್ರೀ ವೀರಭದ್ರಪ್ಪನವರ ಆ ಮಗುವಿಗೆ ನಾಮಕರಣ ಮಾಡಿದರು. ನಾನು ಬರುತ್ತೆನೆಂದು ಮಾತುಕೊಟ್ಟ ಆ ತೊಟ್ಟಿಲ ಕಾರ್ಯಕ್ರಮದಲ್ಲಿ ಬಂದ ಎಲ್ಲಾ ಶರಣ ದಂಪತಿಗಳಿಗೆ ಹೋಳಿಗೆ ಊಟ ಮಾಡಿಸಿ, ತುಪ್ಪದಿಂದ ಕೈಯನ್ನು ತೊಳೆದು ತಮ್ಮ ಹರಕೆಯನ್ನು ಮುಟ್ಟಿಸಿ ಪಾವನರಾದರು.

ಬೆಡಕುಂದಾ ಗ್ರಾಮಕ್ಕೆ ಹೋಗುತ್ತಿರುವಾಗ

ಒಂದಾನೊಂದು ಕಾಲದಲ್ಲಿ ಶ್ರೀ ವೀರಭದ್ರಪ್ಪನವರು ಬಾಳೂರ ಗ್ರಾಮದಿಂದ ಶಿಶು ಮಕ್ಕಳ ಜೊತೆಗೆ ಬೆಡಕುಂದಾ ಗ್ರಾಮಕ್ಕೆ ಹೋಗುತ್ತಿದ್ದರು.

ಬೇಸಿಗೆ ಕಾಲದಲ್ಲಿ ಹೋಗುತ್ತಿರುವಾಗ ಜನರಿಗೆ ದಣಿವಾಗಿ ನಡುದಾರಿಯಲ್ಲಿ ಒಂದು ದೊಡ್ಡದಾದ ಮಾವಿನಗಿಡದ ನೆರಳನು ನೋಡಿ ಅಲ್ಲಿ ಕೂಡಬೇಕೆಂದು ವಿಚಾರ ಮಾಡಿ ಅಪ್ಪನವರಿಗೆ ತಿಳಿಸಿದರು. ಆಗ ಅಪ್ಪನವರು ಆ ಗಿಡದ ಕಡೆ ನೋಡಿ ಅದರ ಕೆಳಗೆ ಕೂಡಬಾರದು ಬೇಕಾದರೆ ಆ ಕಡೆಯಿರುವ ಚಿಕ್ಕ ಗಿಡದ ನೆರಳಿನಲ್ಲಿ ಕುಳಿತುಕೊಳ್ಳಿರೆಂದರು. ಆಗಲೆಂದು ಆ ಚಿಕ್ಕ ಗಿಡದ ಕೆಳಗೆ ಕುಳಿತ್ತಿರುವಾಗ ಆ ದೊಡ್ಡ ಗಿಡದ ಟೊಂಗೆಯು ಮುರಿದು ಬಿತ್ತು. ಆಗ ಅಪ್ಪನವರು ಹೇಳಿದ ಮಾತು ಸತ್ಯವೆಂದು ಎಲ್ಲರಿಗೂ ಅರಿವಾಯಿತು.

ಮುಂದೆ ಅಲ್ಲಿಂದ ನೇರವಾಗಿ ಬೆಡಕುಂದಾ ಗ್ರಾಮವನ್ನು ತಲುಪಿದರು. ಆ ಗ್ರಾಮದಲ್ಲಿ ಪಾಟೀಲರ ಮನೆಗೆ ಆಮಂತ್ರಣ ಭಿನ್ನಹದಿಂದ ಅಲ್ಲಿಗೆ ಹೊದರು. ಆ ಪಾಟೀಲರು ಬಂದು ಎಲ್ಲರಿಗೂ ಹಾಗೂ ಶ್ರೀ ಅಪ್ಪನವರಿಗೂ ಹತ್ತಿರ ಬಂದು "ಮತ್ತೆನಾದರೂ ಮಾಡಬೇಕೆ? ಎಂದು ಅಪ್ಪನವರಿಗೆ ಕೇಳಿದನು. ಆಗ ಅಪ್ಪನವರು ಪಾಟೀಲರ ಮಾತನ್ನು ಕೇಳಿ ನೀನು ಬರುವ ಚತುದರ್ಶಿಯ ದಿವಸ ಗಾಯಮುಖದಲ್ಲಿ ಬರುವ ಎಲ್ಲಾ ಶರಣ ಶರಣೆಯರಿಗೂ ತುಪ್ಪದ ಹೋಳಿಗೆ ಮಾಡಿಸಿ. ಊಟಕ್ಕೆ ನೀಡಬೇಕು ಎಂದು ಹೇಳಿದರು. ನಂತರ ನೀನು ಬರುವಾಗ ಜೊತೆಗೆ ಸಿದ್ಧಾಂತ ತೆಗೆದುಕೊಂಡು ಬರಬೇಕು ಎಂದು ಅಪ್ಪನವರು ಹೇಳಿದರು. ಅಪ್ಪನವರ ಮಾತಿಗೆ ತಪ್ಪಬಾರದೆಂದು ತಿಳಿದು. ಆ ಪಾಟೀಲರು ಚತುದರ್ಶಿಯ ದಿವಸ ಗಾಯ ಮುಖದಲ್ಲಿ ಬಂದ ಎಲ್ಲಾ ಜನರಿಗೂ ತುಪ್ಪದ ಹೋಳಿಗೆ ಊಟದ ಸಿದ್ಧತೆಯನ್ನು ಮಾಡಿಸಿದರು. ಅಲ್ಲಿಗೆ ಬರುವಾಗ ಅಪ್ಪನವರು ಹೇಳಿದ ಸಿದ್ಧಾಂತವನ್ನು ಮರೆತು ಬಂದರು. ಅದರ ಸಲುವಾಗಿ ಪಾಟೀಲರು ನೇರವಾಗಿ ಅಪ್ಪನವರ ಕಡೆಗೆ ಬಂದು ಅವರ ಪಾದ ಮುಟ್ಟಿ, ಕ್ಷಮಿಸಿರಿ ಅಪ್ಪನವರೆ ನಾನು ಸಿದ್ಧಾಂತ ತರುವುದು ಮರೆತು ಬಿಟ್ಟಿದ್ದೇನೆ. ಎಂದು ತಿಳಿಸಿದರು. ಆಗ ಅಪ್ಪನವರು ಮುಖವು ಚಿಕ್ಕವಾಗಿ ಅದು ಸುಡುತ್ತದೆ ಎಂದು ಹೇಳಿಬಿಟ್ಟರು.

ಮರುದಿವಸ ಆ ಪಾಟೀಲರ ಅಂಗಡಿಯಲ್ಲಿ ಬೆಂಕಿ ಹತಿತ್ತು ಇಡಿ ಅಂಗಡಿ ಸುಟ್ಟು ಭಸ್ಮವಾಗುತಿತ್ತು. ಅದನ್ನು ಆರಿಸಲು ಹೋದ ಪಾಟೀಲರು ಬೆಂಕಿಗೆ ಸಿಕ್ಕು ಬಿದ್ದು ಅಲ್ಲಿಯೆ ಸತ್ತರು. ಈ ರೀತಿಯಾಗಿ ವೀರಬದ್ರಪ್ಪನವರ ಚರಿತ್ರೆಯಿಂದ ತಿಳಿಯಬಹುದಾಗಿದೆ.

# ಹುಡಗಿಯ ಕರಿಬಸವೇಶ್ವರ ದೇವಸ್ಥಾನ

ಹುಮನಾಬಾದ ತಾಲೂಕಿನ ಹುಡಗಿಗ್ರಾಮ ಐತಿಹಾಸಿಕ ಶರಣ ಸ್ಮಾರಕವಿರುವುದು ಕಂಡುಬರುತ್ತದೆ. ಈ ಗ್ರಾಮದಲ್ಲಿ ಕರಿಬಸವೇಶ್ವರರು ಅಥವಾ ಕರಿಬಸಪ್ಪಾನವರು ಸಾಮಾಜಿಕ ಪರಿವರ್ತನೆಗೆ ಶ್ರಮಿಸಿದರು. ಇವರು ಪವಾಡ ಪುರುಷರಾಗಿದ್ದರು. ಹುಡಗಿ ಗ್ರಾಮವು ಮುಂಬೈ – ಹೈದ್ರಾಬಾದ ರಾಷ್ಟ್ರೀಯ ಹೆದ್ದಾರಿ (ಎನ್.ಎಚ್.೯) ಯಲ್ಲಿದೆ. ಗ್ರಾಮದಲ್ಲಿ ಜನರು ವಿವಿಧ ಕಸುಬುಗಳಲ್ಲಿ ತೊಡಗಿದ್ದರು, ವ್ಯವಸಾಯವನ್ನು ಅವಲಂಬಿಸಿರುತ್ತಾರೆ. ಇಂತಹ ಪುಣ್ಯ ಭೂಮಿಯಲ್ಲಿ ಮೆರೆದುಹೊದ ಶರಣರ ವೃತ್ತಾಂತವಿದೆ.

ಈ ಗ್ರಾಮದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ನೆಲೆಗೊಂಡಿರುವ ಮನೆತನಗಳಿವೆ. ರಾಮಲಿಂಗೇಶ್ವರ ದೇವಸ್ಥಾನ ಪ್ರಸಿದ್ಧವಾಗಿದೆ. ಯಂಕಮ್ಮಾ ತಾಯಿಯ ದೇವಸ್ಥಾನ ಅದ್ಬುತವಾಗಿದೆ. ಈ ಪುಣ್ಯ ಕ್ಷೇತ್ರದಲ್ಲಿ ಹಲವಾರು ಸಾಂಸ್ಕೃತಿಕ ಚಟುವಟಿಕೆಗಳು ಜಾತ್ರೆ. ಮದುವೆ, ಭಜನೆ, ಕೀರ್ತನೆಗಳು ಜರುಗುವುದು. ವಿಶೇಷವಾಗಿದೆ ಎಂದು ಹೇಳಲಾಗುತ್ತದೆ.

ಕರಿಬಸವೇಶ್ವರರು ಒಬ್ಬ ಮಹಾನ ಶರಣರಾಗಿದ್ದು ಅವರು ಜ್ಞಾನಿಯಾಗಿದ್ದರು. ನಡೆತೆಯಲ್ಲಿ ವಿಭಿನ್ನತೆ ಹೊಂದಿದ್ದರೂ ಗುಣ – ಸ್ವಭಾವ ಮಾತ್ರ ಸಹಜವಾಗಿತ್ತು. ಭಕ್ತಾದಿಗಳು ಕರಿಬಸವೇಶ್ವರರ ದೇವಸ್ಥಾನಕ್ಕೆ ತಮ್ಮ ಸಹಜತೆಯಿಂದಲ್ಲೇ ತಿಳಿದಷ್ಟು ದಾನ ಮಾಡಿರುತ್ತಾರೆ. ನಿತ್ಯ ದಾಸೋಹ ವಿರುವುದು ಪುಣ್ಯ ಕಾರ್ಯವಾಗಿದೆ.

ಕರಿಬಸವೇಶ್ವರರು ಮೂಲತಃ ಚಳಕಾಪುರದವರಾಗಿದ್ದು, ತಂದೆ ಚನ್ನಯ್ಯಾ ತಾಯಿ ಜೋತ್ಯಮ್ಮಾ ದಂಪತಿಗಳ ಸುಪುತ್ರನಾಗಿ ಜನಿಸಿದ ಕರಿಬಸವೇಶ್ವರರು ಬಾಲ್ಯದಿಂದಲ್ಲೇ ದಿಗಂಬರಾಗಿದ್ದರು. ಆಗಿನ ಹುಡಗಿ ಮಠದ ಪಿಠಾಧಿಪತಿಗಳು ಈ ಗ್ರಾಮಕ್ಕೆ ಭೇಟ್ಟಿಕೊಟ್ಟಿದ್ದರು. ಆಗ ಮಠಾದಿಪತಿಗಳ ಕರೆಯ ಮೇರೆಗೆ ಕರಿಬಸವೇಶ್ವರರು ಚಳಕಾಪುರದಿಂದ ಹುಡಗಿಗೆ ಆಗಮಿಸಿದರು. ಅವರು ಪ್ರಾರಂಭಿದಿಂದಲ್ಲೇ ವಿಶೀಷ್ಟ ಜ್ಞಾನವನ್ನು ಪಡೆದಿದ್ದರ. ತಮ್ಮ ಬಾಲ್ಯ ಜೀವನವನ್ನು ಹುಡಗಿ, ಗ್ರಾಮದಲ್ಲಿಯೇ ಉಳಿದುಕೊಂಡು ಜನತೆಯ ಕಲ್ಯಾಣವನ್ನೇ ಮಾಡಲು ಪ್ರಯತ್ನಿಸಿದರು. ಸಾಮಾಜಿಕ ಅಸಮಾನತೆ, ಮೋಡನಂಬಿಕೆಗಳನ್ನು ಸಮಾಜದಿಂದ ನಿರ್ಮೂಲನೆ ಮಾಡಲು ಶ್ರಮಿಸಿದ್ದರು. ಹೀಗಾಗಿ ದಿಗಂಬರರಾದ ಕರಿಬಸವೇಶ್ವರರು ಹಲವಾರು ಪವಾಡಗಳನ್ನು ಮಾಡಿರುತ್ತಾರೆ.

*ಶಂಬುಲಿಂಗೇಶ್ವರ ದೇವಸ್ಥಾನ*

ಹುಡಗಿ ಗ್ರಾಮದಲ್ಲಿಯ ಈಗಲೂ ಪ್ರಸ್ತುತವಿರುವ ರಾಮಲಿಂಗೇಶ್ವರ ದೇವಸ್ಥಾನ ಅತೀ ಪ್ರಾಚೀನವಾಗಿದೆ. ಇದು ಕರಿಬಸವೇಶ್ವರರ ಕಾಲ ಘಟನೆಯೊಂದನ್ನು ಸ್ಮರಿಸುತ್ತದೆ. ಈ ದೇವಸ್ಥಾನದಲ್ಲಿ ಕರಿಬಸವೇಶ್ವರರು ಅನುಷ್ಠಾನದಲ್ಲಿ ಕುಳಿತ್ತಿರಲು ಪಕ್ಕದ ಸ್ವಾಮಿಗೆ ಅಥವಾ ಜೊಯಿಸರಿಗೆ ಮೂರು ದಿವಸಗಳವರೆಗೆ ಈ ದೇವಸ್ಥಾನ ದ್ವಾರ ತೆಗೆಯದಂತೆ ಆಜ್ಞಾಪಿಸಿದರು. ಆಗ ಎರಡನೇ ದಿವಸಕ್ಕೆ ಸ್ವಾಮಿಯು ಅಥವಾ ಜೊಯಿಸ ಆದೇಶವನ್ನು ಮೀರಿ ದೇವಸ್ಥಾನದ ದ್ವಾರದ ಒಂದು ಬಾಗಿಲನ್ನು ತೆರೆದು ನೋಡಿದನು. ಹಿಗಾಗಿ ಅನುಷ್ಠಾನ ಪೂರ್ಣಗೊಳ್ಳದೇ ಕೊಪ್ಪಗೊಂಡ ಕರಿಬಸವೇಶ್ವರರು ಸ್ವಾಮಿಯನ್ನು ಶಾಪವನ್ನು ಕೊಟ್ಟರು. "ನಿನ್ನ ವಂಶ ನಿರ್ವಂಶವಾಗಲೆಂದರು" ಎಂಬುದಾಗಿ ತಿಳಿದು ಬರುತ್ತದೆ.

ಈಗಲೂ ಕೂಡ ಸ್ವಾಮಿಯ ಮನೆಯಲ್ಲಿ ಗಂಡು ಮಕ್ಕಳಿಲ್ಲದಿರುವುದು ತಿಳಿಯಬಹುದು. ಹೀಗೆ ಕರಿಬಸವೇಶ್ವರರು ಏಕಾಗ್ರತೆ ಭಕ್ತಿ ಧ್ಯಾನದಲ್ಲಿ ಅಪಾರವಾದ ನಂಬಿಕೆಯನ್ನಿಟ್ಟದ್ದರು. ಅಷ್ಟೇ ಅಲ್ಲದೇ ಅಂತರ್ಯಾಮಿಯಾಗಿದ್ದರು. ಕರಿಬಸವೇಶ್ವರ ಶರಣರು ಮನುಷ್ಯನ ತಾಳ್ಮೆಯನ್ನು ಪರೀಕ್ಷಿಸಲೆಂದು ಹಲವಾರು ಪ್ರಯೋಗಗಳನ್ನು ಮಾಡುತ್ತಿದ್ದರು. ಹೀಗಾಗಿ ಸಮಾಜದಲ್ಲಿ ಸಹನೆ, ಸಹಕಾರ, ಪ್ರೀತಿ ಅಗತ್ಯತೆಗಳನ್ನು ಬೆಳೆಸಬೇಕೆಂಬುವುದು ಅವರ ಮುಖ್ಯ ಗುರಿಯಾಗಿತ್ತು.

ಘಾಣಿಗೆಯ ಮನೆತನಕ್ಕೆ ಶಾಪ ವಿಟ್ಟದು.

ಘಾಣಿಗೆಯ ಮನೆತನದವರು ಹಿಂದುಮನೆತನದವರಾಗಿದ್ದರು. ಅವರನ್ನು ಮುಸ್ಲಿಂರನ್ನಾಗಿ ಪರಿವರ್ತಿತರಾಗುವಂತೆ ಶಾಪವನ್ನಿತ್ತರು. ಘಾಣಿಗೆಯ ಮಾಲೀಕ ಮಲ್ಲಪ್ಪನು ಕರಿಬಸವೇಶ್ವರವರನ್ನು ಬಾರುಕೋಲಿನಿಂದ ದಂಡಿಸಿದ್ದನು. ಹೀಗಾಗಿ ಅವರು "ನಿನ್ನ ಮನೆ ಮುಲ್ಲಾವಾಗಲಿ" ಎಂದು ಶಾಪವನ್ನಿತ್ತರಂತೆ ಆ ಮನೆ ಮುಸ್ಲಿಂ ಮನೆಯಾಗಿರುವುದು ಇಂದಿಗೂ ಗ್ರಾಮದಲ್ಲಿ ಪ್ರಸ್ತುತವಾಗಿದೆ.

ಈ ರೀತಿಯಾಗಿ ಕರಿಬಸವೇಶ್ವರರು ಮನುಷ್ಯನ ಅಹಂಕಾರವನ್ನು ಭಸ್ಮಮಾಡುವ ನೀಟ್ಟಿನಲ್ಲಿ ಸಮಾಜದಲ್ಲಿರುವ ಶ್ರೀಮತಿಕೆಯನ್ನು ಬಡತನದಿಂದ ಸಮಾನತೆಯನ್ನು ಪ್ರತಿಪಾದಿಸುತ್ತಿದ್ದರು ಅಲ್ಲದೇ ಸಮಾಜದಲ್ಲಿ ಸಾಮಾಜಿಕ ಪರಿವರ್ತನೆಯನ್ನು ತರಲು ಪ್ರಯತ್ನಿಸಿದ್ದರು.

ಕರಿಬಸವೇಶ್ವರರು ಆಧ್ಯಾತ್ಮಿಕಾ, ಸಮಾಜಿಕ ಜೀವನಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದರು. ಸಮಾಜದಲ್ಲಿ ಶಾಂತಿ ಸಹಬಾಳ್ವೆಯ ಜೀವನ ಉತ್ತಮ ಬದುಕನ್ನು ರೂಪಿಸುತ್ತದೆ ಎಂಬುವುದಾಗಿ ತೋರಿಸಕೊಟ್ಟಿದ್ದರು. ಈ ನಿಟ್ಟಿನಲ್ಲಿ ಇಂದಿಗೂ ಅವರ ವ್ಯಕ್ತಿತ್ವದ ಚಿತ್ರಣ ಗ್ರಾಮದ ಮನೆ ಮನಗಳಲ್ಲಿ ಅಚ್ಚಳಿಯಂತೆ ಉಳಿದುಕೊಂಡಿದೆ.

ಕರಿಬಸವೇಶ್ವರರ ಸತ್ಯ– ನಿಷ್ಠತೇಯ ಪರೀಕ್ಷೆ

ಕರಿಬಸವೇಶ್ವರರಿಗೆ ಇಬ್ಬರು ಭಕ್ತಾದಿಗಳದ್ದರು. ಅವರು ಶರಣೆ ಯಂಕಮ್ಮಾತಾಯಿ ಮತ್ತು ಮಡಿವಾಳಪ್ಪ. ಯಂಕಮ್ಮಾ ತಾಯಿಯು ಕರಿಬಸವೇಶ್ವರರ ಎಲ್ಲಾ ಸತ್ವ ಪರೀಕ್ಷೆಯನ್ನು ಭಕ್ತಿಯಿಂದ ಪೂರ್ಣಗೊಳಿಸಿದ್ದರು.

ಒಂದು ದಿವಸ ಕರಿಬಸವೇಶ್ವರರು ಶರಣೇ ಯಂಕಮ್ಮಾಳ ಗ್ರಾಮಕ್ಕೆ ಭೇಟ್ಟಿ ಕೊಟ್ಟಿದರು. ಆಗ ಯಂಕಮ್ಮಾಳು ತನ್ನ ತಾಳಿಯನ್ನು ಕೈಯಲ್ಲಿ ಇಟ್ಟಿಕೊಂಡು ಬೆಂಕಿಯನ್ನು ಹೋತ್ತಿಸಿ, ಕೈಯಲ್ಲಿಯೇ ಪ್ರಸಾದವನ್ನು ಮಾಡಿ, ಗುರು ಭಕ್ತಿಯನ್ನು ಮೇರೆದಳು. ಇದರಿಂದ ಪ್ರಸನ್ನವಾದ ಗುರು ಈಕೆಯನ್ನು ತನ್ನ ಶಿಷ್ಯೇಳಾಗಿ ಮಾಡಿಕೊಂಡರು. ಮುಂದೆ ಗುರು ಭಕ್ತಿಯಲ್ಲೇ ತನ್ನ ಪೂರ್ಣ ಜೀವನವನ್ನು ಕಳೆದಳು. ಗುರುವಿನ ಭಕ್ತಿಯ ಶಕ್ತಿಯನ್ನು ಜಗಕ್ಕೆ ಸಾರಿದಳು. ಗುರುವಿನ ಗುಲಾಮನಾಗುವ ತನ್ನಕ ದೋರೆಯದಣ್ಣ ಮುಕ್ತಿ ಎಂಬ ದಾಸರ ವಾಣಿಗೆ ಸ್ಫೂರ್ತಿಯಾಗಿದ್ದಳು. ಹೀಗೆ ಶರಣರ ಮಹಿಮೆ ಆದರ್ಶಗಳು, ವಿಚಾರಗಳು ಲೋಕ ಕಲ್ಯಾಣಕ್ಕೆ ಮಾದರಿಯಾಗಿವೇ ಎಂದು ಹೇಳಲಾಗುತ್ತದೆ.

ಮಡಿವಾಳಪ್ಪನವರ ಗುರು ಭಕ್ತಿ ಪರೀಕ್ಷೆ

ಕರಿಬಸವೇಶ್ವರ ಶರಣರ ಇನ್ನೊರ್ವ ನಿಕಟವರ್ತಿ, ಭಕ್ತ ಮಡಿವಾಳಪ್ಪ ಗುರುಗಳ ಸೇವೆಯಲ್ಲಿ ಸದಾ ತೊಡಗುತ್ತಿದ್ದನು. ಅವರು ಬಸವಕಲ್ಯಾಣ ತಾಲೂಕಿನ ಖಟಕ– ಚಿಂಚೋಳಿಯ ಶರಣರಾಗಿದ್ದರು. ಇವರು ಕರಿಬಸವೇಶ್ವರರನು ತಮ್ಮ ಗುರುಗಳೆಂದು ಒಪ್ಪಿಕೊಂಡಿದರು.

ಮಡಿವಾಳಪ್ಪನವರನ್ನು ಬಾವಿಯೊಂದರಲ್ಲಿ ತಳ್ಳಿ ಮೇಲಿನಿಂದ ದೊಡ್ಡ ದೊಡ್ಡ ಬಂಡೆಗಳನ್ನು ಎಸೆದಿದ್ದರು. ಕರಿಬಸವೇಶ್ವರರು ಮಡಿವಾಳಪ್ಪನವರಿಗೆ "ಮಡ್ಯಾ ನಿನಗೆ ಏನಾಗುತ್ತಿದೆ? ಗಾಯವಾಗಿದೆಯೇ?" ಎಂದು ಪ್ರಶ್ನಿನಿಸಿದರು. ಅದಕ್ಕೆ ನನ್ನಗೆನು ಆಗಿಲ್ಲ ಗುರುಗಳೇ ಎಂದು ಉತ್ತರಿಸಿದರು. ಮಡಿವಾಳಪ್ಪ ಬಾವಿಯಿಂದ ಮೇಲೆ ಬಂದು ಗುರುಗಳ ಆಶಿರ್ವಾವನ್ನು ಪಡೆದು ಪರೀಕ್ಷೆಯಲ್ಲಿ ಯಶಸ್ವಿಯಾದನು.

ಕರಿಬಸವೇಶ್ವರರು ಒಂದು ದಿನ ಧ್ಯಾನದಲ್ಲಿ ಮಗ್ನರಾದ ಶಿವ ಭಕ್ತರ ಲಿಂಗಗಳನ್ನು ಮಾಯ ಗೊಳ್ಳಿಸಿದ್ದರು. ಆಗ ಆಶ್ಚರ್ಯಗೊಂಡ ಶಿವ ಭಕ್ತರು ಲಿಂಗಗಳು ಎಲ್ಲಿ ಮಾಯವಾದವ್ವೊ ? ಎಂದು ಪರಸ್ಪರ ಚರ್ಚಿಸುತ್ತೀದ್ದರು. ದಿಗಂಬರಾದ ಕರಿಬಸವೇಶ್ವರರ ಪವಾಡವೇಂದು ತಿಳಿದು ಲಿಂಗಗಳನ್ನು ಮರಳಿಸುವುವಂತೆ ಪ್ರಾರ್ಥಿಸಿದ್ದರು. ಆದ ಶಿವ ಭಕ್ತರನ್ನು ಬಾವಿಯೋಂದರ ಕಡೆ ಕರೆದೊಯ್ಯದರು. "ಶಿವ ಭಕ್ತರೆ ಕರೆಯಿರಿ ನಿಮ್ಮ ಲಿಂಗಗಸ್ನು ಎಂದು ತಿಳಿಸಿದ್ದರು. ಆಗ ಹಾಗೇಯ ಮಾಡಿದ್ದಾಗ ಶಿವ ಭಕ್ತರ ಲಿಂಗಗಳು ಬಾವಿಯೊಳ್ಳಗೆ ಗೊಚ್ಚರಿಸುತ್ತಿದ್ದವು. ಆದರೆ ಯಾವ ಲಿಂಗ ಯಾರದು ಎಂಬುವುದು ತಿಳಿಯದ್ದಾಗಿತ್ತು. ಶಿವ ಭಕ್ತರು ತಮ್ಮ ತಮ್ಮ ಲಿಂಗಗಳನ್ನು ನೀವೇ ಗುರುತಿಸಿ ಕೊಡಬೇಕೆಂದು ಪ್ರಾರ್ಥಿಸಿಕೊಂಡಾಗ ದಿಗಂಬರಾದ ಶ್ರೀ ಕರಿಬಸವೇಶ್ವರರು ಅವರವರ ಲಿಂಗಗಳನ್ನು ಬಾವಿಯಿಂದ ತೆಗೆದು ಕೊಟ್ಟರು. ಹೀಗೆ ಭಕ್ತಿಗೆ ಶ್ರಧೇ, ಆಸಕ್ತಿ, ಏಕಾಗ್ರತ್ತೆ, ಇದ್ದರೆ ಸಾಲದು ಮನುಸ್ಸು ದೇಹಗಳೇರಡು ಒಂದಾದರೆ ಮಾತ್ರ ಮೋಕ್ಷೆಕೆ ದಾರಿ ಕಾಣಬಹುದು ಎಂದು ತಿಳಿಸಿಕೊಟ್ಟರು.

ಶ್ರೀ ಕರಿಬಸವೇಶ್ವರರು ಸಾಮಾನ್ಯರಲ್ಲಿ ಸಾಮಾನ್ಯರಾಗಿ ಶ್ರೀಮಂತರ ಅಹಂ ಬಾವವನ್ನು ನಾಶ ಪಡಿಸಿ ಶ್ರೀಮಂತರು ಬಡವರು ಎಂಬ ಮೂಡತ್ವವನ್ನು ಅಳಿಸಿಹಾಕಲು ಪ್ರಯ್ನತಿಸಿದ್ದರು. ಅವರು ಜ್ಞಾನಿಯಾಗಿದ್ದರು ಮಡಿವಾಳಪ್ಪನವರನ್ನು ಚಿಟ್ಟಗುಪ್ಪಾದಲ್ಲಿ ಗವಿಯೊಂದನ್ನು ನಿರ್ಮಿಸಲು ಪ್ರೇರಣೆ ನೀಡಿದ್ದರು. ಅದರಂತೆ ಅಲ್ಲೋಂದು ಗವಿ ರಚನೆಯಾಯಿತ್ತು. ಅವರು ಚಿಟ್ಟಗುಪ್ಪ ಸ್ಥಳಕ್ಕೆ ಬೇಟ್ಟಕೊಡುತ್ತಿದ್ದರು. ಗುರು ಭಕ್ತಿಯ ಪರಾಕಾಷ್ಠೇಯನ್ನು ಮೇರೆದರು. ಅವರ ಲಿಂಗೈಕ್ಯರಾದ ಸ್ಥಳದಲ್ಲಿ ಗದ್ದಿಗೆಯನ್ನು ರಚನೆ ಮಾಡಿ ದೇವಸ್ಥಾನವನ್ನು ಕಟ್ಟಲಾಗಿದೆ. ಅವರ ಹೆಸರಿನಲ್ಲಿ ಹಲವಾರು ಭಕ್ತರು ಅನ್ನದಾಸೊಹ ನಡೆಸುತ್ತಿದ್ದಾರೆ. ಹೀಗೆ ಹುಡಗಿ ಗ್ರಾಮವು ಈ ದೇವಸ್ಥಾನದಿಂದ ಐತಿಹಾಸಿಕ ಪ್ರಸಿದ್ಧಿ ಹೊಂದಿದೆ.

# ವಿಮಲಖೇಡ ಮಠದ ಐತಿಹಾಸಿಕ ಚರಿತ್ರೆ.

ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಒಂದು ಗ್ರಾಮ ವಿಮಲಖೇಡ ಇದಕ್ಕೆ ಬೇಮಳಖೇಡಾವೆಂತಲೂ ಕರೆಯುತ್ತಾರೆ. ಮುಂಬೈ – ಹೈದ್ರಾಬಾದ ರಾಷ್ಟ್ರೀಯ ಹೆದ್ದಾರಿಯ (ಸಂಖ್ಯೆ ೯) ಹುಮನಾಬಾದ ಜಹಿರಾಬಾದ್ ಮಧ್ಯದಲ್ಲಿರುವ ಭಂಗೂರು ಗ್ರಾಮದಿಂದ ದಕ್ಷಿಣಕ್ಕೆ ಮೂರು ಕಿ.ಮೀ. ದೂರದಲ್ಲಿರುವ ಈ ಗ್ರಾಮ ಸುಸಂಸ್ಕೃತ ನಾಗರಿಕರಿಂದ ಕೂಡಿದೆ. ಈ ಗ್ರಾಮ ರಚನೆಯಾದ ಸಂಗತಿ ತುಂಬಾ ರೋಚಕವಾಗಿದೆ.

ಈ ಗ್ರಾಮದ ಐತಿಹಾಸಿಕತೆ ಸ್ವಾರಸ್ಯಕರವಾಗಿದೆ. ಸು. ೧೪೦೦ ವರ್ಷಗಳ ಹಿಂದೆ (ಕಿ.ಶ. ೬ನೇ ಶತಮಾನ) ಈ ಪ್ರದೇಶವು ದಟ್ಟವಾದ ಅರಣ್ಯವಾಗಿತ್ತು. ಗಿರಿಕಂದರಗಳಿಂದ ಕೂಡಿದ ಈ ಅಭಯಾರಣ್ಯರದಲ್ಲಿ ಅನೇಕ ಕ್ರೂರ ಪ್ರಾಣಿಗಳು ವನ್ಯ ಜೀವಗಳು ತುಂಬಿಕೊಂಡಿದ್ದವು. ರಾಯಚೂರ ಜಿಲ್ಲೆಯ ಬಿಟ್ಟಾಲಿ ಗ್ರಾಮದ ಮೂಲದವರಾಗಿದ್ದು. ಕಲ್ಯಾಣ ಭಾಲ್ಕಿ ಭಾಗದಲ್ಲಿ ನೆಲೆಸಿ ತುಂಬಾ ಮಹಾತ್ಮರೆಂದು ಜನಪ್ರೀಯರೆನಿಸಿದ ಶ್ರೀ ಮಹಾಂತೇಶ್ವರ ಎಂಬ ಹೆಸರಿನ ಮಹಾನ್ ತಪ್ವಸ್ವಿಗಳೊಬ್ಬರು ಈ ಘೋರಾರಣ್ಯದಲ್ಲಿ ತಪ್ಪಸ್ಸನೂ ಆಚರಿಸಿದರು.

ಶ್ರೀ ಮಹಾಂತೇಶ್ವರ ಸ್ವಾಮಿಗಳು ತಾವು ತಪ್ಪು ಗೈದ ಸ್ಥಳದ ಸಮೀಪದಲ್ಲಿ ಶ್ರೀ ಹನುಮಾನ ಮೂರ್ತಿಯನ್ನು ಸ್ಥಾಪಿಸಿ ಸಣ್ಣ ಪ್ರಮಾಣದಲ್ಲಿ ಗುಡಿಕಟ್ಟಿಸಿದರು. ಈ ಪ್ರದೇಶಕ್ಕೆ ಜನರು ಭೀಮಾರೇಶ್ಯಾ ಎಂದು ಕರೆಯಲಾರಂಭಿಸಿದರು ಬಲಭೀಮ ನೆಲೆಗೊಂಡ ಈ ಪ್ರದೇಶಕ್ಕೆ ಅವನ ಹೆಸರಿನಲ್ಲಿ ಭೀಮಾರಣ್ಯಾ ಎಂದು ಹೆಸರು 'ಬಂದಿತು. ಕಾಲಕ್ರಮೇಣ ಸ್ವಾಮಿಜಿಯವರ ದರ್ಶನ ಸೇವೆಗಾಗಿ ಆಗಮಿಸಿದ ಜನರು ಅಲ್ಲಿಯೇ ವಾಸಿಸಲು ಪ್ರಾರಂಭಿಸಿದರು. ಮುಂದೆ ಈ ಪ್ರದೇಶಕ್ಕೆ ಭೀಮಗೀರಿ ಎಂದು ಕರೆಯಲಾರಂಭಿಸಿದರು. ಅದು ಭೀಮಗಿ ಎಂದು ಹೆಸರಿನ ಗ್ರಾಮವಾಯಿತ್ತು. ಕಾಲಕ್ರಮೇಣ ಭೀಮಗೀರಿ ಗ್ರಾಮ ವಿಮಲಖೇಡಾ ಅಥವಾ ಬೇಮಳಖೇಡಾ ಎಂಬ ಹೆಸರಿನಿಂದ ಪ್ರಚಲಿತವಾಯಿತ್ತು. ವಿಮಲಖೇಡಾ ಗ್ರಾಮ ನಿರ್ಮಾಣದ ಐತಿಹಾಸಿಕ ಸಂಗತಿಯನ್ನು ಶ್ರೀ ಕರಿಬಸವ ಕವಿಗಳು ಬರೆದ ರಾಯಚೂರ ಜಿಲ್ಲೆಯ ಬಿಟ್ಟಾಲಿ ಗ್ರಾಮದ ಸಾವಿರ ದೇವರ ಮಠದ ಪ್ರಕಾಶಿತ ಗ್ರಂಥ ಶ್ರೀ ಮಹಾತೇಶ್ವರ ಪುರಾಣದಲ್ಲಿ ನೋಡಬಹುದಾಗಿದೆ.

ಬೀದರ ಜಿಲ್ಲೆಯಲ್ಲಿ ಗುರುತಿಸಲಾದ ಪ್ರಾಚೀನ ಕಾಲದ ೩೫ ನೆಲೆಗಳಲ್ಲಿ ವಿಮಲಖೇಡ ಒಂದೆನಿಸಿದೆ. ಈ ಗ್ರಾಮಕ್ಕೆ ಇಂದು ಭೀಮಳಖೇಡ ಎಂದು ಕರೆದಿದ್ದಾರೆ. ಕ್ರಿ.ಶ. ೧೧೦೦ ರ ರಂಜೋಳ ಶಾಸನದಲ್ಲಿ ಭೀಮಳಖೇಡ ಮತ್ತು ಧನಶ್ರೀ ಗ್ರಾಮಗಳ ಉಲ್ಲೇಖ ಮಾಡಲಾಗಿದೆ. ಇವೆರಡು ಜಹೀರಾಬಾದ ತಾಲೂಕಿಗೆ ಅಂದು ಸೇರಿದವು ಎಂದು ಶಾಸನದಿಂದ ತಿಳಿದು ಬರುತ್ತದೆ. ವೀರಶೈವ ಪಂಚ ಮಠಗಳಲ್ಲೊಂದಾದ ಶ್ರೀಮದ್ ರಂಭಾಪುರ್ (ಬಾಳೆ ಹೊನ್ನೂರು) ಜಗದ್ಗುರು ಶ್ರೀ ರೇಣುಕಾಚಾರ್ಯರ ಶಾಖಾ ಮಠಗಳಲ್ಲಿ ವೀಮಲಖೇಡ ಶ್ರೀ ಹೀರೇಮಠ ಗ್ರಾಮಕ್ಕೆ ಮುಕುಟ ಪ್ರಾಯವಾಗಿದೆ.

ಕ್ರಿ.ಶ. ೬ನೇ ಶತಮಾನದಿಂದ ಭವ್ಯ ಪರಂಪರೆ ಹೊಂದಿದ ಈ ಹಿರೇಮಠದ ಹಾಗೂ ವಿಮಲಖೇಡ ಗ್ರಾಮದ ಸ್ಥಾಪನೆಗೆ ಕಾರಣಕರ್ತರಾದ ಪುಣ್ಯ ಪುರುಷರು ಶ್ರೀ ಮಹಾಂತೇಶ್ವರ ಮಹಾ ಸ್ವಾಮಿಗಳು ಅವರು ಮಹಾನ ತಪ್ವಸ್ವಿಗಳು ಪವಾಡ ಪುರುಷರು ಅವರ ತಪ್ಪೋಪ್ರಭಾವದಿಂದ ಆರಂಭಗೊಂಡ ಈ ಹಿರೆಮಠದ ಶರಣರ ವಂಶಾವಳಿ ಈ ಕೆಳಕಂಡತ್ತೀದೆ.

೧) ಶ್ರೀ ಮಹಾಂತೇಶ್ವರ ಮಹಾಸ್ವಾಮಿಗಳು (ಹೀರೆಮಠದ ಮೂಲ ಸ್ಥಾಪಕರು)

೨) ಶ್ರೀ ರುದ್ರದೇವರು (ಪಟ್ಟದ ದೇವರು)

೩) ಶ್ರೀ ಹಿರಿಯ ಶಾಂತದೇವರು

೪) ಶ್ರೀ ರಾಚೋಟ್ಟೆಪ್ಪನವರು

೫) ಶ್ರೀ ಗುರುಪಾದ ಶಿವಾಚಾರ್ಯ ಮಹಾ ಸ್ವಾಮಿಗಳು (ಪ್ರಸ್ತುತ ಶರಣರು)

ಶ್ರೀ ಹಿರೇಮಠದ ರೂವಾರಿ ಮೊದಲನೇ ಮಹಾಂತೇಶ್ವರ ಶರಣರು ಶ್ರೀ ವೀರಭದ್ರಪ್ಪ ಶರಣರು, ವಿಮಲಖೇಡ ಹೀರೇಮಠದ ಗುರು ಶರಣ ಪರಪರೆಯ ೧೪ ನೇಯ ಶರಣಾಧಿಪತ್ತಿಗಳು. ಇವರು ವಿಮೇಳಖೇಡ ಗ್ರಾಮದವರು. ಅವರ ತಂದೆಯ ಹೆಸರು ಶ್ರೀ ಸಿದ್ರಾಮಯ್ಯಾ ತಾಯಿಯ ಹೆಸರು ಶ್ರೀ ವೀರಸಂಗಮ್ಮಾ ಇವರ ಮನೆತನದ ಹೆಸರು ಮಠಪತಿ ಈ ಮನೆತನದವರು ವಿಮಲಖೇಡದಲ್ಲಿ ಇಂದಿಗೂ ಇದ್ದಾರೆ ಅವರಿಗೆ "ಕೋಲಕ" ಎಂದು ಕರೆಯಲಾಗುತ್ತದೆ. ಸಿದ್ರಾಮಯ್ಯಾ – ವಿರಸಂಗಮ್ಮಾ ದಂಪತಿಗಳಿಗೆ ಮೂರು ಜನ ಗಂಡು ಮಕ್ಕಳು. ಅವರಲ್ಲಿ ವೀರಭದ್ರಯ್ಯನವರೆ ಹಿರಿಯ ಮಗ ಸಂಗಬಸಯ್ಯಾ, ಗುರುಪಾದಯ್ಯಾ ಕಿರಿಯ ಮಕ್ಕಳು ವೀರ ಸಂಗಮ್ಮಾ ಚೊಚ್ಚಲ ಬಸುರಿ ಇದ್ದಾಗ ಹೆರಿಗೆಗಾಗಿ ತನ್ನ ತವರು ಮನೆ ಹೋಗಿದ್ದಳು. ಅಲ್ಲಿಯೇ ಶ್ರೀ ವೀರಭದ್ರಯ್ಯಾನಿಗೆ ಜನ್ಮ ನೀಡಿದಳು. ಅವರೆ ಮುಂದೆ ವಿಮಲಖೇಡ ಮಠಾದಿಪತಿಗಳಾದರು. ಉಡುಬನಳ್ಳಿಯಲ್ಲಿ ಜನ್ಮತಳೆದು ಶ್ರೀ ವೀರಭದ್ರಯ್ಯಾ ಶಿಶುವನ್ನು ಐದು ತಿಂಗಳ ನಂತರ ಮಡದಿ – ಮಗುವನ್ನು ಕರೆದುಕೊಂಡು ಬರಲು ಸಿದ್ಧರಾಮಯ್ಯ ಉಡುಬನಳ್ಳಿಗೆ ಹೋದರು. ಆ ಉರಿನವರು ಶ್ರೀ ವೀರಭದ್ರಯ್ಯ ನವರನ್ನು ಉಡುಮನಳ್ಳಿಯ ಮಠಾದಿಪತಿಯನ್ನಾಗಿಸಿಕೊಳ್ಳುತ್ತೇವೆ. ನಿಮಗೆ ಕೊಡುವುದಿಲ್ಲ ಎಂದು ಹಟ್ಟಹಿಡಿದರು. ಆದರೆ ಸಿದ್ರಾಮಯ್ಯಾ ಆ ಮಗುವನ್ನು ವಿಮಲಖೇಡದ ಮಠಾಧಿಪತಿಯನ್ನಾಗಿ ಮಾಡುವ ಪ್ರಸ್ತಾಪವನ್ನಿಟ್ಟರು. ಈ ಕಾದಾಟ ನ್ಯಾಯ ಪಂಚಾಯತಿಯವರೆಗೂ ಹೊಯಿತು.

ಈ ಪರಿಸ್ಥಿತಿಯನ್ನರಿತ ವಿಮಲಖೇಡದ ಗ್ರಾಮಸ್ಥರು ಒಂದು ದಿನ ರಾತ್ರಿ ಐದು ತಿಂಗಳ ಮಗು ಶ್ರೀ ವೀರಭದ್ರಯ್ಯಾನನ್ನು ಕರೆದುಕೊಂಡು ವಿಮಲಖೇಡಕ್ಕೆ ಬಂದರು ಗುರುಪಾದೋದಕ ಆ ಮಗುವಿನ ಬಾಯಿಗೆ ಹಾಕಿ ಮೈ ಮೇಲೆ ಸವರಿದ ಕ್ಷಣ ಮಗು ಅಳು ನಿಲ್ಲಿಸಿ ನುಂಗಲಾರಂಭಿಸಿತು. ಮುಂದೆ ಬೆಳೆದು ದೊಡ್ಡವನಾಗಿ ಶ್ರೀ ವೀರಭದ್ರಯ್ಯನ ವಿದ್ಯಾಭ್ಯಾಸ ಹೀರೆಮಠದಲ್ಲಯೇ ನಡೆಯಿತು ಕನ್ನಡ, ಮರಾಠಿ, ತೆಲಗು, ಹಿಂದಿ, ಭಾಷೆಗಳನ್ನೇ ಶ್ರೀ ವೀರಭದ್ರಯ್ಯ ಕಲಿತರು.

ಗುರು ಶ್ರೀ ಮಹಾಂತೇಶ್ವರರಿಂದ ಮಂತ್ರ ದೀಕ್ಷೆ ಪಡೆದು ಸಾಧನಾ ನಿರಂತನಾದ ಶಿಷ್ಯ ಶ್ರೀ ವೀರಭದ್ರದೇವರು ಲೋಕಾಂತವನ್ನು ಮರೆತು ಏಕಾಂತದಲ್ಲಿ ವಿಹರಿಸಲಾರಂಭಿಸಿದರು. ವೀರಶೈವ ಧರ್ಮದ ಷಟಸ್ಥಳ್ ಅಷ್ಟಾವರಣ ಪಂಚಾಚಾರಗಳನ್ನು ನಿಷ್ಠೆಯಿಂದ ಸಾಧನೆಗೈಯಲಾರಂಭಿಸಿದರು. ಅವರಿಗೆ ಅಷ್ಟಾವರಣವೇ ಅಂಗ ಪಂಚಾಚಾರವೇ ಪ್ರಾಣ ಷಟಸ್ಥಲವೇ ಆತ್ಮವಾದವು. ಮಹಾಂತೇಶ್ವರರು ವೀರಭದ್ರಯ್ಯನಿಗೆ ಮಂತ್ರೋಪದೇಶ ಮಾಡಿ ಮಠದ ಉತ್ತರಾಧೀಕಾರಿಯನ್ನಾಗಿ ಮಾಡಿಕೊಳಲು ನಿರ್ಧರಿಸಿದರು. ಗುರುವಿನ ಹಸ್ತಾ ತನ್ನ ಮಸ್ತಕಕ್ಕೆ ಸ್ಪರ್ಷವಾಗಿ ಶ್ರೀ ವೀರಭದ್ರಯ್ಯಾ ವೀರಭದ್ರಪ್ಪ ಶರಣರಾದರು.

ಶಿಷ್ಯನ ಸಾಧನಾ ಪಥವನ್ನು ಗಮನಿಸಿದ ಗುರುಗಳು ಈತ ಸಾಮನ್ಯ ವ್ಯಕ್ತಿಯಲ್ಲ. ಒಂದು ಬ್ರಹತ ಶಕ್ತಿ ಎಂಬುದನ್ನು ಮನಗಂಡರು. ಈತ ನಿಜಕ್ಕೂ "ಗುರುದೇವನೆಂದೆ" ಸಂಭೂಧಿಸುತ್ತಿದ್ದರೂ ಶಿಷ್ಯನ ಜ್ಞಾನಕ್ಕೆ ಸೋತು ಸ್ವತಃ ಶ್ರೀ ಮಹಾಂತೇಶ್ವರರು ಶ್ರೀ ವೀರಭದ್ರಪ್ಪನವರನ್ನು "ಗುರುದೇವ" ಎಂದು ಕರೆಯುತ್ತಿದ್ದರು.

ಶ್ರೀ ವೀರಭದ್ರಪ್ಪನವರು ಲೇಖಕರಾಗಿದ್ದರು. ಅವರು ತಮ್ಮ ಜೀವಿತಾವಧಿಯಲ್ಲಿ ಅನೇಕ ಲೇಖನಗಳನ್ನು ನೂರಾರು ತತ್ವ ಪದಗಳನ್ನು ರಚಿಸಿದ್ದು ತಿಳಿದು ಬರುತ್ತದೆ. ಅವರು ಶಿವಾನುಭವದಲ್ಲಿ ಬಲ್ಲಿದವರಾಗಿದ್ದರು. ಜೀವ – ಶಿವನ ನೆಲೆಯನ್ನು ಅಪಾರವಾಗಿ ತಿಳಿದುಕೊಂಡಿದ್ದರು.

ಜೀವ – ಶಿವನ ಭೇಟಿ ಮಾಡಿಸಣ್ಣ
ಅರಿವಿನಿಂದ ಆರು ಮೇಟ್ಟಿಲೇರಣ್ಣ
ಪಂಚಾಚಾರದ ಉರುಗೋಲು ಹಿಡಿಯಣ್ಣ
ಎಂದು ಜೀವಾತ್ಮ ಪದ್ಧವನ್ನು ಹಾಸು ಹೊಕ್ಕಾಗಿ ಹೆಣೆದಿದ್ದಾರೆ.

ಭುವಿಗೆ ಭವದಾಸೆಯನ್ನು ಬಿಡಿಸಲು ಅನುಭವದ ಅಡಿಗೆಯ ಮಾಡಣ್ಣ ಸಜ್ಜನರ ಸಂಗವ ಕೂಡಣ್ಣ !" ಎಂದು ಹೇಳುತ್ತಾ ಈ ಭವದಿಂದ ಪಾರಾಗಲು ದಾರಿ ತೋರಿಸಿ ಎಚ್ಚರಿಸಿದ್ದಾರೆ. ಒಮ್ಮೆ ಗ್ರಾಮಸ್ಥರಿಂದ ತಮಗೆ ತೊಂದರೆಯಾದಾಗ.

ಬರಬಾರದಿತ್ತು ಇಂಥ ಮಠಕ್ಕ ।
ಬೇಕಂತ ನಮ್ಮ ತಂದಿ ಕೂಟ್ಟಾರ, ಹಟಕ ॥
ಆರು ಮಂದಿ ಬಣಜಗೇರಾ ಕಾಟ ।
ಒಳಗಡೆ ಸೇರ್ಯಾವ ಮರಿಗಳು ಥೊಂಟ (ತುಂಟ) ॥

ಎಂಬ ಪದ್ಯ ಬರೆದು ತಮ್ಮ ಬದುಕಿನ ಘಟನೆಯನ್ನು ಪದ್ಯದ ಮೂಲಕ ಹೇಳಿದ್ದಾರೆ. ತಮ್ಮ ಬದುಕಿನ ಸಂಬಂಧಿಸಿದ ಘಟನೆಗಳನ್ನು ತಮಗೆ ಎದುರಾದ ಸಂದೇಹ ಸಮಸ್ಯಗಳನ್ನು ತಿಳಿದುಕೊಳ್ಳಲು ಅವುಗಳನ್ನು ಪರಿಹರಿಸಿಕೊಳ್ಳಲು ಅನೇಕರು ಮಠಕ್ಕೆ ಬಂದು ಶ್ರೀ ವೀರಭದ್ರಪ್ಪ ದೇವರನ್ನು ಬೇಟಿಯಾಗಿ ತಮ್ಮ ಸಂದೇಹಗಳಿಗೆ ಪರಿಹಾರ ಕಂಡುಕೊಳ್ಳುತ್ತಿದ್ದರು. ತಮ್ಮ ಮನಸ್ಸು ತಮ್ಮ ಸ್ವಾಧೀನವಾಗಿದ್ದಾಗ.

ಎಂಥ ಕುದರೆ ಕೊಂಡನಲ್ಲ
ಎಷ್ಟು ಲಗಾಮು ಹಿಡಿದು ಜಗ್ಗಿದರು
ಅದು ನಿಲ್ಲುವದಿಲ್ಲವಲ್ಲ ।
ಎಂದು ಮನಸ್ಸಿನ ಚಂಚಲತೆಯ ಬಗ್ಗೆ ಹೇಳಿದ್ದಾರೆ.
ಬಾಹ್ಯ ವ್ಯವಹಾರವನ್ನು ಮರೆತು ತನ್ನೊಳಗೆ ಚೈತನ್ಯ ಕೂಡಿ ತೃಪ್ತರಾದಾಗ
ಎಂಥ ಹಾದರ ಕಲಿತೇನಮ್ಮ
ನಿರಂತರ ಸುಖಿಯಾನೆ
ನನಗೇನು ಕಮ್ಮಿ ।

ಶ್ರೀ ವೀರಭದ್ರಪ್ಪನವರು ಕವಿ – ಲೇಖಕರಾಗಿರದೆ ಸ್ವತಃ ಉತ್ತಮ ಹಾರ್ಮೋನಿಯಂ ಹಾಗೂ ತಬಲಾ ವಾದಕರಾಗಿದ್ದರು. ನಾಟಕ ಬಯಲಾಟಕ ಅನೇಕ ಹಾಡುಗಳನ್ನು ತಾವೇ ರಚಿಸಿ ಅವುಗಳಿಗೆ ಧಾಟಿ

ಹಾಕಿ ಹಾಡುತ್ತಿದ್ದರು. ಥಾಟ ಬಯಸಿ ಬಂದ ಸಂಗೀತ ಕಲಾವಿದ್ದರರಿಗೆ ಬೇರೆ ಬೇರೆ ಠಾಠಗಳಲ್ಲಿ ಥಾಟ ಹಾಕಿಕೊಡುತ್ತಿದ್ದರು. ಶ್ರೀ ವೀರಭದ್ರಪ್ಪನವರು "ನಳರಾಜ" ಮತ್ತು ಭಕ್ತಗುಂಮ ಎಂಬ ಎರಡು ನಾಟಕಗಳನ್ನು ರಚಿಸಿದ್ದಾರೆ. ಅವು ಈಗ ಉಪಲಬ್ದವಿಲ್ಲದ್ದು ಖೇದವೆನ್ನಿಸುತ್ತದೆ.

ಶ್ರೀ ವೀರಭದ್ರಪ್ಪನವರು ಅನೇಕ ತತ್ವ ಪದಗಳನ್ನು ರಚಿಸಿದ್ದಾರೆ. ಅವರು ಗ್ರಾಮ ದೇವತೆ ಶ್ರೀ ನಗರೇಶ್ವರನನ್ನು ಸ್ಮರಿಸಿ ಈ ತತ್ವ ಪದಗಳನ್ನು ಬರೆದಂತಿದೆ ಅವರ ಪದ್ಯದ ಅಂಕಿತ ನಾಮ "ಶ್ರೀನಗರೇಶ್ವರ" ಎಂದಿದೆ.

ರಾಚೋಟ್ವೆಪ್ಪನವರು

ಶ್ರೀ ವೀರಭದ್ರಪ್ಪನವರ ತರುವಾಯ ರಾಚೋಟ್ಟೇಪ್ಪನವರು ಹದಿನೈದನೆ ಮಠಾದಿಪತಿಯಾದರು. ಇವರು ಗುಲ್ಬರ್ಗಾ ಜಿಲ್ಲೆಯ ಚಿಂಚೋಳ್ಳಿ ತಾಲೂಕಿನ ಕೊಳಾರ ಎಂಬ ಗ್ರಾಮದವರು. ತಂದೆ ಶ್ರೀ ಪರತಯ್ಯ ತಾಯಿ ಶ್ರೀಮತಿ ಸುಗಮ್ಮನವರು ರಾಚೋಟ್ಟೇಪ್ಪನವರಿಗೆ ಇಬ್ಬರು ಸಹೋದರರಿದ್ದರು. ನಂದಯ್ಯ ಮತ್ತು ವೀರಯ್ಯ ಅವರ ಮನೆತನದವರು ಕೊಳಾರ ಮತ್ತು ವಿಮಲಖೇಡದಲ್ಲಿ ಈಗಲೂ ಪ್ರಸ್ತುತ ಇದ್ದಾರೆ.

ರಾಚೋಟ್ಟೇಪ್ಪನವರು ವಿವಿಧ ಕಡೆಗಳಲ್ಲಿ ಪ್ರವಚನ ಹೆಳುತ್ತಿದ್ದರು ಒಮ್ಮೆ ಮಹಾರಾಷ್ಟ್ರದಲ್ಲಿ ಪ್ರವಚನಕ್ಕೆ ಹೋದಾಗ ಪ್ರವಚನದ ಮಧ್ಯೆ ಪ್ರಾಪಂಚಿಕ ಹಾಗೂ ಪಾರಮಾರ್ಥಿಕವನ್ನು ಸಮಸಮವಾಗಿ ಹೇಳುತ್ತಾ "ಸಬ್ ಚೇಡೊ ಇಸ್ ಪಾಹಡ । ಧೀರೆ ಧೀರೆ ಚಡೊ ಇಸ್ ಪಹಾಡ॥ ಎಂದರಂತೆ ಬಹಳ ಜನರಿಗೆ ಇದು ಅರ್ಥವಾಗಲಿಲ್ಲ. ಎಲ್ಲರೂ ಈ ಶರೀರವೆಂಬ ಪರ್ವತ ಏರಬೇಕಾಗುತ್ತದೆ. ಸಾವಧಾನ ಸಾವಧಾನವಾಗಿ ಈ ಶರೀರವನ್ನು ಏರುತ್ತಾ ಜೀವನದ ಗೌರಿಶಂಕರ ಪರ್ವತ ಮುಟ್ಟಿ ತನ್ನ ಬದುಕಿನ ಗುರಿ ಮುಟ್ಟಬೇಕೆಂಬುದು ಈ ಮಾತಿನ ಅರ್ಥವಾಗಿತ್ತು.

ತಮ್ಮ ಇಳಿ ವಯಸ್ಸಿನಲ್ಲಿಯೂ ನಾಡಿನ ಅನೇಕ ಕಡೆಗೆ ಸಂಚರಿಸಿ ಧರ್ಮ ಉಪದೇಶ ಮಾಡಿ ಭಕ್ತರನ್ನು ಉದ್ದರಿಸುತ್ತಿದ್ದರು. ಭೀಮಲಖೇಡಾಕ್ಕೆ ಸಮೀಪವಿದ ಭಂಗೊರಕ್ಕೆ ತಮ್ಮ ಶಾಖಾ ಮಠದಲ್ಲಿ ಪ್ರವಚನ ಕಾರ್ಯಕ್ರಮ ನೀಡಬೇಕೆಂದು ಗುರುಗಳಲ್ಲಿ ಭೀನ್ನವಿಸಿದರು. ನಾಡಿನಾದ್ಯಂತ ಸಂಚರಿಸಿ ಬಂದು ತುಂಬಾ ದಣಿವಾಗಿತ್ತು. ವಿಶ್ರಾಂತಿ ಪಡೆಯದೆ ಭಂಗೂರ ಭಕ್ತರ ಭಿನ್ನಹವನ್ನು ತಿರಸ್ಕರಿಸಲು ಮನಸ್ಸಾಗಲಿಲ್ಲ ತಮ್ಮಗೆ ಅನಾರೋಗ್ಯವಿದ್ದದು ಗೋತ್ತಿದ್ದರು ಪ್ರವಚನ ಕಾರ್ಯಕ್ರಮಕ್ಕೆ ಹಾಜರಾಗುತ್ತಾರೆ. ಭಂಗೊರ ಶಾಖಮಠಕ್ಕೆ ಪ್ರವಚನ ಕೇಳಲು ಸುತ್ತ ಮುತ್ತಲಿನ ಜನರು ಅಪಾರ ಸಂಖ್ಯೆಯಲ್ಲಿ ಬರುತ್ತಿದ್ದರು. ಪ್ರವಚನ ಮುಕ್ತಾಯವಾಗುವ ಮುನ್ನಾದಿನ ಪ್ರವಚನ ಗೈಯುತ್ತ ಗುರುಗಳು " ಮೈ ಥೋಡುಂಗಾ ಇಸ್ ಪಹಾಡ್ ! ಎಂದು ನುಡಿದು ನಕ್ಕರು. ಅವರ ಮಾತಿಗೆ ಎಲ್ಲರು ನಕ್ಕು ನಲಿದಾಡಿದರು. ತಿಂಗಳಪರ್ಯಂತ ನಡೆದುಕೊಂಡು ಬಂದ ಪ್ರವಚನ ನಾಳೆ ಮುಕ್ತಾಯವಾಗುತ್ತದೆ ಎಂದು ಆ ಮಾತಿನ ಅಥೈವಿರಬಹುದೆಂದು ಎಲ್ಲರು ಭಾವಿಸಿದರು. ಮರುದಿನ ಪ್ರವಚನ ಕಾರ್ಯಕ್ರಮ ಅತ್ಯಂತ ಅದ್ದೂರಿಯಾಗಿ ವೈಭವಪೂರ್ಣವಾಗಿ ಮುಕ್ತಾಯವಾಯಿತು. ಪ್ರವಚನ ಮುಕ್ತಾಯವಾದ ಕ್ಷಣಾರ್ದದಲ್ಲಿಯೇ ರಾಚೋಟ್ಟೇಪ್ಪನವರು ಲಿಂಗೈಕ್ಯರಾದರು. ಅವರಾಡಿದ ಮಾತು ಅಕ್ಷರಶಃ ಸತ್ಯಾವಾಯಿತು. ಮೈ ಚಡೂಂಗಾ ಇಸ್ ಪಹಾಡ್ ! ಎಂದು ಅವರು ಈ ಭವವೆಂಬ ಪರ್ವತ ವೇರಿ ಕೈಲಾಸದ ಶಿವನಲ್ಲಿ ಲೀನವಾದರು ಶ್ರೀಗಳ ಅಂತ್ಯಕ್ರಿಯ ಭಂಗೂರ ಶಾಖಾ ಮಠದಲ್ಲಿ ಮಾಡಲಾಯಿತ್ತು. ಅಲ್ಲಿಯೇ ಗುರುಗಳ ಸಮಾದಿ ಕಟ್ಟಿಸಿದರು.

ಶ್ರೀ ಗುರುಪಾದ ಶಿವಾಚಾರ್ಯರು ಪ್ರಸ್ತುತ ವಿಮಲಖೇಡದ ೧೬ನೇ ಮಠದ ಪಿಠಾಧಿಪತಿಗಳಾಗಿದ್ದಾರೆ. ಅವರು ಕನ್ನಡ ಹಿಂದಿ, ಮರಾಠಿ, ಉರ್ದು, ಮತ್ತು ಮೋಡಿ ಭಾಷೆಗಳನ್ನು ಬಲ್ಲವರಾಗಿದ್ದಾರೆ.

ಶ್ರೀ ಗುರುಪಾದ ಶಿವಾಚಾರ್ಯರು ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಐತಿಹಾಸಿಕ ಪ್ರಸಿದ್ಧ ಗೋರಟಾ ಗ್ರಾಮದಲ್ಲಿ ಜನಿಸಿದ್ದಾರೆ. ಅವರ ಪೂರ್ವಶ್ರಾಮದ ಹೆಸರು ಕಾಶಿನಾಥ ದೇವರು ಗೋರಟಾ ಗ್ರಾಮದ ಇತಿಹಾಸ ತುಂಬಾ ಪ್ರಾಚೀನದು. ಅರಸ ವಿಕ್ರಮಾದಿತ್ಯನ ಕಾಲದಲ್ಲಿ ಗೊರ್ಟಾ ಗ್ರಾಮ ಲಲಿತ ಕಲೆಗಳ ವಿದ್ಯಾ ಕೇಂದ್ರ "ಅಗ್ರಹಾರ"ವಾಗಿತ್ತೇಂದು ಹೇಳಲಾಗುತ್ತದೆ.

ರೇವಣ್ಣಸಿದ್ದಯ್ಯನವರಿಗೆ ಮಕ್ಕಳಾಗಿರುವುದಿಲ್ಲ. ಅವರು ಸಂತಾನ ಸಿದ್ಧಿಗಾಗಿ ತಪಸನಾಚರಿಸಿದರು ಆಗ ದೇವರ ದಿವ್ಯವಾಗಿ ಶಿವ ರಾತ್ರಿಯ ಒಂದು ರಾತ್ರಿ ಇದ್ದಕಿದಂತೆ ಶಿವ ಸಾಕ್ಷಾತ್ಕಾರವಾಯಿತು. "ನಿನಗೆ ಸಂಪತ್ತು ಬೇಕೊ? ಅಥವಾ ಸಂತಾನ ಬೇಕೊ? ಎಂದು ಆರ್ಶಿರ ವಚನ ಕೇಳಿಸಿತ್ತು. ಅದಕ್ಕೆ ಅವರು ನನಗೆ ಎರಡು ಬೇಕು ಎಂದರು!. ಇಲ್ಲಿ ಎರಡರಲ್ಲಿ ಯಾವುದಾದರೊಂದು ಮಾತ್ರ ಬೇಡು ! ಎಂದು ಬೆಳಕಿನೊಂದಿಗೆ ಆಕಾಶವಾಣಿ ಮಾಯವಾಯಿತು.

ರೇವಣ್ಣಸಿದ್ಧಯ್ಯ ತಂಗೆಮ್ಮಾ ದಂಪತಿಗಳಿಗೆ ಜೇಷ್ಠ ಪುತ್ರನಾಗಿ ೧೯೨೯ ರಲ್ಲಿ ಜನಿಸಿದರು. ಬಾಲ್ಯದಲ್ಲಿರುವಾಗಲೇ ರೇವಣ್ಣಸಿದ್ದಯ್ಯಾ ಗುರುದೇವಿ ಹಾಗೂ ತಂಗಮ್ಮಾ ಲಿಂಗೈಕ್ಯರಾದರು. ಹೆತ್ತವರನೊ ಕಳೆದುಕೊಂಡು ಚಿಕ್ಕವಸಿನಲ್ಲಿಯ ಅಣ್ಣ ಸುಕೇಶ ಸ್ವಾಮಿಗಳ ಆಶ್ರಯದಲ್ಲಿ ಬೆಳೆದು ವಿದ್ಯಾವಂತರಾದರು.

ಶ್ರೀ ಗುರುಪಾದ ಶಿವಾಚಾರ್ಯರು ಅಧ್ಯಾತ್ಮಿಕ ಹಾಗೂ ಶಿಕ್ಷಣಾಭ್ಯಾಸ ಏಡಸಿಯ ಈ ಸದ್ದೇಮನ ಗುರುಕುಲದಲ್ಲಿ ೧೯೪೨ – ೪೮ರ ವರೆಗೆ ನಡೆಯಿತು. ಈ ಮೇಲೆ ಅವರು ೧೯೪೯ ರಲ್ಲಿ ಮರಾಠಿ ಕಲಿತರು. ಏಡಸಿಯಾನಲ್ಲಿದ್ದಾಗೆಲೆ ಶ್ರೀ ಗುರುಪಾದ ಶಿವಾಚಾರ್ಯರ ಕಿರಿಯ ಸಹೋದರ ಗುರುಪಾದಯ್ಯ ಲಿಂಗ ಪೂಜೆ ಮಾಡುತ್ತಲೆ ಲಿಂಗೈಕಾರಾದರು. ಇವರು ಉನ್ನತ ಶಿಕ್ಷಣಕ್ಕಾಗಿ ೧೯೫೦ ರಲ್ಲಿ ಕಾಶಿಗೆ ಹೋದರು. ಅಲ್ಲಿ ತ್ರಿವೇಣಿ ಸಂಗಮ ಪಾಠ ಶಾಲೆಯಲ್ಲಿ ಸಂಸ್ಕತ ವಿದ್ಯಾಭ್ಯಾಸ ಮಾಡಿದರು. ಕಾಶಿಯಲ್ಲಿ ಅಪಾರವಾಗಿ ಸಂಸ್ಕೃತ ಅಭ್ಯಾಸ ಮಾಡಿ ಮರಳಿದರು.

ಧರ್ಮ ಜಾಗೃತಿ ಹಾಗೂ ಲೋಕ ಕಲ್ಯಾಣಾರ್ಥವಾಗಿ ಅವರು "ಕೈಗೊಂಡ ಧರ್ಮಜಾಗರಣ ಸಂಚಾರ" ಕರ್ನಾಟಕ ಆಂಧ್ರ ಹಾಗೂ ಮಹಾರಾಷ್ಟ್ರದಲ್ಲಿ ಜಯಭೇರಿ ಮೊಳಗಿಸಿತು. ಕರ್ನಾಟಕದ ಬೀದರ; ಬಸವಕಲ್ಯಾಣ, ಹುಮನಾಬಾದ, ಭಾಲ್ಕಿ, ಕಮಲನಗರ; ಆಂಧ್ರ ಪ್ರದೇಶದ, ಹೈದ್ರಾಬಾದ, ಸಿಕಿಂದರಬಾದ, ಜಹೀರಾಬಾದ, ಮೇಡಕ, ಸಂಗಾರೆಡ್ಡಿ, ಸೊಲ್ಲಾಪುರ, ಉಸ್ಮಾನಾಬಾದ, ಪರಭಣಿ, ಬಾಚೂರ, ಪರಳಿ, ಜಾಲನಾ, ಔರಾಂಗಬಾದ; ದೇದಣಿ, ಸಾತಾರ, ಶಂಭು, ಉಂಬರ್ಗಾ, ಮುಂಬೈ, ಮುಂತಾದ ಪ್ರಮುಖ ನಗರಗಳಲ್ಲಿ ಅವರು ಕನ್ನಡ ಮರಾಠಿ ಹಾಗೂ ಹಿಂದಿ ಭಾಷೆಗಳಲ್ಲಿ ಪ್ರವಚನ ಗೈದು ಭಕ್ತಾವಿಗಳಲ್ಲಿ ಧರ್ಮಜಾಗೃತಿ ಮಾಡುವ ಕಾರ್ಯವನ್ನು ಅತ್ಯಂತ ಯಶಸ್ವಿಯಾಗಿ ನೇರವೇರಿಸಿದರು.

ಶ್ರೀ ಗುರುಪಾದ ಶಿವಾಚಾರ್ಯರು ನಿಸ್ವಾರ್ಥ ಭಾವದಿಂದ ಸೇವೆಯಲ್ಲಿ ತೂಡಗಿಸಿಕೊಂಡು ಮಠದ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಂಡು ಕಾರ್ಯತತ್ಪರರಾಗಿದ್ದಾರೆ. ಶಿವಾಚಾರ್ಯ ಮಾಹಾ ಸ್ವಾಮಿಗಳು ಭಕ್ತರ ಇಚ್ಛೆಯ ಮೇರೆಗೆ ದೇಶದ ಅನೇಕ ಕಡೆಗಳಲ್ಲಿ ಸ್ಥಾವರ ಲಿಂಗಗಳನ್ನು ಪತಿಷ್ಠಾಪಿಸಿ ಅವುಗಳನ್ನೇ ಸಂಸ್ಕಾರದಿಂದ ಶುದ್ಧಗೊಳಿಸಿ ತಮ್ಮ ಅಮೃತ ಹಸ್ತದಿಂದ ಪ್ರಾಣ ಪ್ರತಿಷ್ಠಾಪನೆ ಮಾಡಿದ್ದಾರೆ.

ಶ್ರೀ ಗುರುಪಾದ ಶಿವಾಚಾರ್ಯರು ಆದ್ಯಾತ್ಮಿಕತೆಯ ಪ್ರಚಾರದಲ್ಲಿ ತಮ್ಮನು ತೊಡಗಿಸಿಕೊಂಡಿದ್ದಾರೆ ನೆಲ ಜಲದ ಸಾಕ್ಷಿಯಾಗಿ ಅವಿರತ ಪ್ರಾಮಾಣಿಕ ಸೇವೆಯಲ್ಲಿ ನಿರತರಾಗಿದ್ದುಕೊಂಡು ನಾಡಿನ ಜನತೆಗೆ ಶಾಂತಿ ಸೌಹಾರ್ದತೆಯ ಬದುಕಿಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ತಮ್ಮ ಜೀವನದಲ್ಲಿ ಜನರ ಪ್ರಗತಿ ಸಮಾಜದ ಕಲ್ಯಾಣವನ್ನು ಬಯಸುವಂತಹವರಾಗಿದ್ದಾರೆ. ಈ ನಿಟ್ಟಿನಲ್ಲಿ ಶ್ರೀ ಗುರುಪಾದ ಶಿವಾಚಾರ್ಯರು ನಿರತರಾಗಿರುವುದು ಸತ್ಯಂಶವಾಗಿದೆ.

# ಶರಣ ಶಂಭುಲಿಂಗೇಶ್ವರ ಶರಣೇ ಬಸವ್ವನವರ ದೇವಸ್ಥಾನೆ

ರೇಕುಳಗಿ ಗ್ರಾಮದ ಚರಿತ್ರೆ

ಆಚಾರವೇ ಸ್ವರ್ಗ ಅನಾಚಾರವೇ ನರಕವೆಂಬಂತೆ ಭಕ್ತಿ ಮುಕ್ತಿಗೆ ಮಾರ್ಗವಾಗಿದೇ ಪ್ರತಿಯೊಂದು ಕೆಲಸಕ್ಕೂ ನಿಷ್ಠೆ ಪ್ರಾಮಾಣಿಕತೆ ಸಮಯ ಪರಿಪಾಲನೆ ಬಹು ಮುಖ್ಯವಾಗಿರುತ್ತದೆ. ಇದನ್ನು ಶರಣರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದರು. ಬೀದರ ಜಿಲ್ಲೆಯ ಶರಣರ ನಾಡಾಗಿದ್ದು. ರೇಕುಳಗಿ ಗ್ರಾಮವು ಐತಿಹಾಸಿಕ ಶರಣರ ನೆಲೆಯಾಗಿದೆ.

ಬೀದರರಿಂದ ಹುಮನಾಬಾದ ಮಾರ್ಗ ಮಧ್ಯದಲ್ಲಿ ದುಬಲಗುಂಡಿ, ಹಳ್ಳಿಖೇಡ, ಮೀನಕೀರಾ, ರೇಕುಳಗಿ, ಹಳ್ಳಿಗಳು ಇವೆ ರೆಕುಳಗಿ ಗ್ರಾಮದ ಹೊರ ವಲಯದಲ್ಲಿ ಸುಂದರವಾಗಿ ಎರಡು ಜೊಡಿ ಗೊಪುರಗಳು ಕಣ್ಣಿಗೆ ಗೂಚರವಾಗುತ್ತವೆ. ಅವುಗಳೇ ಶರಣ ಶಂಭುಲಿಂಗ ಮತ್ತು ಶರಣೆ ಬಸಮ್ಮನವರ ಐತಿಹಾಸಿಕ ಆದ್ಯಾತ್ಮಿಕ ಚರಿತ್ರೆಯ ಪ್ರತಿಕವಾಗಿದೆ. ಸುಮಾರು ೧೫೦ ವರ್ಷಗಳ ಹಿಂದೆ ದೇವತಾಮರುಷನಾಗಿ ಧರೆಗಿಳಿದು ಬಂದು ಭಕ್ತರ ಅಶೊತ್ತರಗಳನ್ನು ಕಷ್ಟ ಕಾರ್ಪಣ್ಯಗಳನ್ನು ಈಡೇರಿಸಿದ ಶಿವಾನುಭವ ಪಡೆದವರೆಂದು ಕ್ರೀರ್ತಿಗೆ ಪಾತ್ರನಾದವನೆ ಶಂಭುಲಿಂಗ ಸ್ವಾಮಿ.

ಶಂಭುಲಿಂಗ ಸ್ವಾಮಿಯು ಭೂಮಿಗೆ ಆಗಮಿಸಿದ್ದರು. ರೇಕುಳಗಿ ಗ್ರಾಮದಲ್ಲಿ ಪ್ರಸಿದ್ಧಿ ಪಡೆದ ಭರ್ಚಗೌಡರ ~~ಮನೆತನ~~ಯಲ್ಲಿ ಮೀನಕೇರಾದಿಂದ ಸಂಗಮ್ಮಾ ಎಂಬುವಳು ಸೊಸೆಯಾಗಿದ್ದಳು. ಈಕೆ ಹೆಲವು ದಿನಗಳ ಕಾಲ ಎದೆಯಲ್ಲಿ ಭೀಕರ ನೋವನ್ನೊಂದು ಅನುಭವಿಸುತ್ತಿದ್ದಳು. ಅದರಿಂದ ಮುಕ್ತಿ ಪಡೆಯುವಂತೆ ದೇವರನ್ನು ಧ್ಯಾನಿಸುತ್ತಿದ್ದಳು. ಹೀಗೆ ಒಂದು ದಿವಸ ಶಂಭುಲಿಂಗ ಆಕೆಯ ಮನೆಗೆ ಅಥಿತಿಯಾಗಿ ಬಂದಿರು ಲೋಕ ಕಲ್ಯಾಣಕ್ಕಾಗಿಯೇ ಮೀಸಲಾಗಿದ್ದ. ಶುಂಭುಲಿಂಗ ಆ ಗೌಡತಿಯ ರೋಗ ಗುಣಮುಖ ಪಡಿಸಿದನು. ಆಕೆಯ ಎದೆಯಿಂದ ಹಾಲು ಬರುವ ಬದಲು ರಕ್ತ, ಕಿವು ಬರುತ್ತಿತ್ತು. ಅದನ್ನು ಕುಡಿದು ಆಕೆಯ ರೋಗವನ್ನು ಗುಣಪಡಿಸಿದನು.

ಸಂಗಮ್ಮಾ ಮುಂದೆ ಶಂಭುಲಿಂಗನ ಭಕ್ತೆಯಾಗುವಂತೆ ಪ್ರಸ್ತಾಪಿಸುತ್ತಾಳೆ. ಆಗ ಶುಂಭುಲಿಂಗ ಭಕ್ತೆಯಾಗುವುದು ಅಷ್ಟು ಸುಲಭವಲ್ಲ ಕಠಿಣ ತಪಸ್ಸು, ಜೋತೆಗೆ ದೃಢವಾದ ಮನಸ್ಸು ಗುರುವಿನ ಆಶಿರ್ವಾದ ಬೇಕಾಗುತ್ತದೆ. ಎಂದರು ಸಂಗಮ್ಮಾ ಪರಿಕ್ಷೇಗೊಳಪಡುತ್ತಾಳೆ.

ಶಿವಶರಣೆ ಬಸವ್ವನನ್ನು ಪರೀಕ್ಷಿಸಿದ ಬಗ್ಗೆ.

ಸಂಗಮ್ಮಾ ಎಂಬ ಗೌಡತಿಯು ಎದೆ ನೋವಿನಿಂದ ಗುಣಮುಖಳಾದಳು. ಈ ಸಂಸಾರಿಕ ಭವ ಬಂಧನದಿಂದ ಮುಕ್ತಿ ಪಡೆಯಲಿಚ್ಛಿಸಿದಳು. ಆಗ ಶಂಭುಲಿಂಗನನ್ನು ಲಿಂಗ ದೀಕ್ಷೆ ಕೇಳಿದಳು. ಅದಕ್ಕೆ ಲಿಂಗ ದೀಕ್ಷೆ ಅಷ್ಟು ಸುಲಭವಲ್ಲ ಅದನ್ನು ಕೊಡಲು ಪರೀಕ್ಷಿಸಬೇಕಾಗುತ್ತದೆ ಎಂದರು. ನಿಮ್ಮ ಯಾವ ಪರಿಕ್ಷೆಗೂ ನಾನು ಸಿದ್ದ ನಿದ್ದೇನೆ ಎಂದಳು ಸಂಗಮ್ಮಾ.

ನಾಗರಪಡ್ಡಿ ಮುಳ್ಳು

ನಾಗರಪಡ್ಡಿ ಮುಳ್ಳನ್ನು ರಾಶಿಗಟ್ಟಲೆ ಕಡಿದು ಗದ್ದುಗೆ ರೀತಿಯಲ್ಲಿ ಸಂಗ್ರಹಿಸಿದ್ದರು. ಆಗ ಸಂಗಮ್ಮನನ್ನು ಅದರ ಮೇಲೆ ಕುಣಿಯಲು ಹೇಳಿದರು.

ಗುರುವಿನ ಆಜ್ಞೆಯಂತೆ ಶಂಭುಲಿಂಗವೆಂದು ನಾಮ ಸ್ಮರಣೆ ಮಾಡುತ್ತಾ ಚೂಪಾದ ಮುಳ್ಳಿನ ಕಂಟಿಯ ಮೇಲೆ ಕುಣಿದಾಡಿದಳು. ಆಕೆಗೆ ನೋವಿನ ಬದಲಾಗಿ ಸಂತೋಷ ಉಂಟಾಗುತ್ತಿತ್ತು ಈಕೆಯ ಭಕ್ತಿ, ಶ್ರದ್ಧೆ ದೃಢತೆಗೆ ಮೆಚ್ಚಿದ ಸ್ವಾಮಿಯು ಸಂಗಮ್ಮಾಳನ್ನು "ಬಸವ್ವ" ಎಂದು ಪುನಃ ನಾಮಕರಣ ಮಾಡಿ ತನ್ನ ಶಿಷ್ಯಯನ್ನಾಗಿ ಸ್ವೀಕರಿಸಿದರು. ಈ ಮುಂದೆ ಶಿವಶರಣೆ ಬಸವ್ವನೆಂಬ ನಾಮದೊಂದಿಗೆ ಪ್ರಸಿದ್ಧೆಯಾದಳೆಂದು ತಿಳಿದುಬರುತ್ತದೆ.

ಶಂಭುಲಿಂಗ ಸ್ವಾಮಿಗಳು ಸಂಗಮ್ಮಾಳನು ತಲೆ ಬೋಳಿಸಿ ಆಕೆಯನ್ನು ಪುನರ್ಜನ್ಮ ನೀಡಿ ಬಸವ್ವ ಎಂದು ನಾಮಕರಣ ಮಾಡಿ ಶರಣೆ ಎಂದು ಕರೆದರು. ಮುಂದೇ ಗುರು ಸೇವೆಯನ್ನು ಮಾಡುತ್ತಿದ್ದಳು ಕಾಮ, ಕ್ರೋಧ, ಮೋಹ, ಮದ, ಮತ್ಸರ, ಲೋಭಗಳೆಂಬ ಅರಿಷಡ್ವರ್ಗಗಳೆಂಬ ರಾಕ್ಷಸರನ್ನು ಮನಸ್ಸಿನಿಂದ ಸುಟ್ಟ ಹಾಕಿದಳು.

ಸಂಗಮ್ಮಾಳ ಮನೆಯವರು ಮತ್ತು ಗಂಡನ ಕಡೆಯವರು ಸಂಗಮ್ಮನ ವರ್ತನೆಯನ್ನು ಗಮನಿಸಿ ಆಕೆಯನ್ನು ಶಿಕ್ಷಿಸಲು ಪ್ರಯತ್ನಿಸಿದರು. ಆದರೆ ಆಕೆಗೆ ಗುರು ಭಕ್ತಿಯ ಕೃಪೆ, ಆಶಿರ್ವಾದವಿತ್ತು ಆದ್ದರಿಂದ ಅವಳು ರಕ್ಷಿಸಲ್ಪಟ್ಟಳು. ದುಷ್ಟರನೇ ಮಾರ್ಗದರ್ಶನ ಮಾಡಿದಳು ಭಕ್ತಿಯ ಅಪಾರ ಮಹಿಮೆಯನ್ನು ತೋರಿದಳು.

ಭಕ್ತಿಯೇ ಮುಕ್ತಿಗೆ ಮೂಲ ಮಂತ್ರ ಎಂಬಂತೆ ಮಾರ್ಗದರ್ಶಕನ ಗುರುವನ್ನು ಸೇರಿ, ಅರಿಷಡ್ವರ್ಗಗಳನ್ನು ಬಂಧನದಲ್ಲಿಸಿ ಮಾಯೇಯೆಂಬುದರಿಂದ ದೂರವಾಗಿ, ಸತ್ಯವೆನು ಕಂಡುಕೊಂಡು ಸದರಿ ಸಮಾಜದಲ್ಲಿ ಕಲ್ಯಾಣವನ್ನು ಬಯಸುವ ನಿರಾಕಾರ, ನಿರ್ಮಲ ಮನಸ್ಸಿನ ಸಾಕಾರ ಮೂರ್ತಿಯು ಬಯಸುವಂತಹವಳಾಗಿದ್ದಳು

ಬಸವ್ವ ಬೀಕ್ಷೆ ಬೇಡುವಂತೆ ಪರೀಕ್ಷೆ

ಬಸವ್ವ ಗುರುವಿನ ಆಜ್ಞೆಯಂತೆ ತಾನು ತವರು ಮನೆಗೆ ಮೊದಲು ಬೀಕ್ಷೆ ಬೇಡಲು ಕಳುಹಿಸಿದನು ಆಗ ಶರಣೆ ಬಸವ್ವ "ಗುರು ಕಾಂತಿ ಬೀಕ್ಷೆ" ಎಂದು ಹೇಳುತ್ತಾ ತವರು ಮನೆ ಕಡೆ ಸಾಗಿದಳು. ತವರು ಮನೆಯನ್ನು ನೋಡಿದಾಕ್ಷಣ ಆಕೆಗೆ ಬಾಲ್ಯದಲ್ಲಿಯ ನೆನೆಪು, ಆಟವಾಡಿದ ಕ್ಷಣಗಳು, ಮರುನೆನಪಿಗೆ ಬರುತ್ತಿದ್ದವು ಅದೇ ಸಮಯಕ್ಕೆ ಆಕೆ ತಾನು ಬಂದ ಕಾರ್ಯವನ್ನು ಮರೆತಂತೆ ಭಾಸವಾಗಿ ಮಾಯೆ ಆಕೆಯಮ್ನ ಆವರೀಸಿತ್ತು. ಗುರುವನು ನೆನಪಿಸಿಕೊಂಡು ವಾಸ್ತವಿಕತೆಯಡಗೆ ಮರಳಿ (ಬೀಕ್ಷೆ ಬೇಡಲು) "ಗುರುಕಾಂತಿ ಬೀಕ್ಷೆ" ಎಂದು ಕೂಗಿದಳು. ಆಗ ಒಳಗಡೆಯಿಂದ ತನ್ನ ಅತ್ತೆ ಬಂದು ಆಶ್ಚರ್ಯದಿಂದ ನೋಡಿದಳು ಸಂಗಮ್ಮಾ ಏನಮ್ಮ ನಿನ್ನ ಈ ಅವತಾರವೆ ? ಎಂದಳು. ಅದಕ್ಕೆ ಎಲ್ಲಾ ಶಂಭುಲಿಂಗನ ಮಹಿಮೆ ಎಂದು ಹೇಳುತ್ತಾ ಬೀಕ್ಷೆ ನೀಡುವಂತೆ ತಿಳಿಸಿದಳು. ಅಷ್ಟರಲ್ಲಿ ಸಹೋದರ ಒಳಗಡೆಯಿಂದ ಬಂದು ಸಂಗಮ್ಮಾಳ ಸ್ಥಿತಿಯನ್ನು ನೋಡಿ ಆಕೆಗೆ ವಿವಿಧ ರೀತಿಯಲ್ಲಿ ಕಾಡಿದನು. ಆದರೂ ಸಹ ಸಂಗಮ್ಮಾ ಗುರುವಾಜ್ಞೆಯನ್ನು ಮಾತ್ರ ಮೀರದೆ ಬೀಕ್ಷೆಯನ್ನು ಪಡೆದುಕೊಂಡು ಪುನಃ ಗುರುವಿನ ಸಾನಿಧ್ಯಕ್ಕೆ ಬಂದಳು.

ಗುರು ಕೃಪೆಯನ್ನು ಮೆಚ್ಚಿದ ಶಂಭುಲಿಂಗ ಆಕೆಯಲ್ಲಿರುವ ನಿರ್ಮಲ, ನಿರಾಕಾರ, ನಿರಾಶಾವಾದದ ಗುಣಗಳನ್ನು ಅಂತರಂಗದ ಭಾವಭಕ್ತಿಯನ್ನು ಪರೀಕ್ಷಿಸಿದನು. ಹೀಗೆ ಹಲವಾರು ಬಗೆಯಲ್ಲಿ ಪರಿಪರಿಯಾಗಿ ಪರೀಕ್ಷಿಸಿದರೂ ಅರಿಷಡ್ವರ್ಗಗಳನ್ನು ಧೃಢ ಮನಸ್ಸಿನಿಂದ ಎದುರಿಸಿದಳು. ಗುರು ಭಕ್ತಿಗಿಂತ ಶ್ರೇಷ್ಠವಾದದು ಮತ್ತೊಂದು ಇಲ್ಲವೆಂಬುದು ಜಗತ್ತಿಗೆ ತೋರಿಸಿಕೊಟ್ಟಳು.

ನಾನು ನನ್ನದು ಎಂಬುದೇ ಗುರುವಿಗೆ ಅರ್ಪಿಸಿದ್ದಳು. ಆಸೆಯಿದ್ದರೆ ತಾನೇ ನಿರಾಸೆಗೆ ಬೆಲೆಯಿರುತ್ತದೆ ಎಂದು ನುಡಿದಳು. ವಿಚಿತ್ರ ದೈವ ಪ್ರಿಯಳಾಗಿ ಗುರು ಭಕ್ತಿಯಲ್ಲಿಯೇ ತಲ್ಲಿನಳಾಗಿದಳು ಸಾವು ! ಯಾರನ್ನು ಕೇಳಿ ಬರುವುದಿಲ್ಲ. ಹಾಗೇಯ ಜಗತ್ತಿನಲ್ಲಿ ಸಾವಿರಾರು ಹೂವುಗಳು ಬೆಳೆಯುತ್ತವೆ ಆದರೆ ಅವೆಲ್ಲವುಗಳಲ್ಲಿ ಕೆಲವೊಂದು ಮಾತ್ರ ದೇವರ ಪಾದ ಪೂಜೆಗೆ ಸೇರುತ್ತವೆ. ಸಮಾಜದಲ್ಲಿನ ಶಾಂತಿ ನಿಂದೆಗಳೆಲ್ಲವು ಸಹಿಸಬೇಕು ಎಂದು ನುಡಿದಳು. ತವರು ಮನೆಯಿಂದ ಬೀಳ್ಕೆ ಪಡೆದು ಕೊಂಡು ಗುರು ಸಾನಿಧ್ಯಕ್ಕೆ ಬಂದಳು.

ಗುರುಗಳ ಆಜ್ಞೆಯಂತೆ ತಲೆ ಬೋಳಿಸಿಕೊಂಡು ಶಿವ ಶರಣೆಯಾದಳು ಸಂಗಮ್ಮಾ ಅಂದಿನಿಂದ ಶರಣೆ ಬಸವ್ವ ಎಂಬ ನಾಮಕರಣದಿಂದಲೆ ಪ್ರಸಿದ್ಧಳಾದಳು. ಹಟ್ಟಿ ಎಂಬುವರ ಹೊಲದಲ್ಲಿ ಆಶ್ರಮವೊಂದು ಕಟ್ಟಬೇಕು ಎಂಬುವುದಾಗಿ ಗುರುಗಳು ಆಜ್ಞಾಪಿಸಿದರು. ಅಲ್ಲಿರುವ ಗಿಡ–ಕಂಟಿಗಳನ್ನು ಬಸವ್ವ ಮತ್ತು ಗುರುಗಳು ಸೇರಿ ಸ್ವಚ್ಛಗೊಳಿಸಿದರು. ಭಕ್ತರೆಲ್ಲ ಸೇರಿ ಆಶ್ರಮ ಕಟ್ಟಿದರು. ಅದು ಇಂದು ಭವ್ಯ ಸುಂದರವಾದ ದೇಗುವವಾಗಿ ಗೋಚರಿಸುತ್ತಿದೆ.

ಗುರುಗಳ ಕೃಪಾಕಟಾಕ್ಷೆಯಲ್ಲಿ ಆಶ್ರಮವೊಂದು ಕಟ್ಟಿದರು. ಭಕ್ತರೇಲ್ಲ ಗುರುವಿನ ಮಹಿಮೆಯನ್ನೆ ಅರಿತು ದೇವರೆಂದು ಭಾವಿಸಿದರು. ದೇವರ ಹೆಸರಿನಲ್ಲಿ ಪ್ರತಿ ವರ್ಷ ಜಾತ್ರೆ ಮಾಡುವ ಸಂಕಲ್ಪವನ್ನು ಗುರುಗಳಿಗೆ ತಿಳಿಸಬೇಕೆಂದು ಆಶ್ರಮದ ಕಡೆಗೆ ಉರಿನ (ಭಕ್ತರೆಲ್ಲ ಸೇರಿ ಜಾತ್ರೆ ಮಾಡುವ ಎಲ್ಲಾ ಏರ್ಪಾಡುಗಳನ್ನು ಭಕ್ತೆ – ಬಸವ್ವನಿಂದ ಕೇಳಿ ತಿಳಿದುಕೊಂಡು ಅಪ್ಪನವರ ಅಪ್ಪಣೆ ಪಡೆದರು) ಜಾತ್ರೆಗೆ ಪೂರ್ವಸಿದ್ದತೆಗಳು ಭರದಿಂದ ಸಾಗಿದವು. ಆಗ ಒಂದು ವಿಸ್ಮಯಕಾರಿ ಘಟನೆಯೊಂದು ಜರುಗಿತ್ತು. ಬಸವ್ವ ಮತ್ತು ಗುರು ಶಂಭುಲಿಂಗ ಹತ್ತಿ ಮನೆತನದ ಹಿರಿಯವನಾದ ಭೀಮರೆಡ್ಡಿ ಎಂಬುವನ ಮನೆಗೆ ಬಂದರು. ಭೀಮರೆಡ್ಡಿ ಆಗ ಬೆಲ್ಲ ತಯಾರಿಸುವ ವ್ಯಾಪಾರಿಯಾಗಿದ್ದನು. ಹೊಲದಲ್ಲಿ ಬೆಳೆದ ಕಬ್ಬಿನಿಂದ ಸ್ವತಃ ತಾನೆ ಬೆಲ್ಲವನ್ನು ತಯಾರಿಸುತ್ತಿದ್ದನು. ಗುರುಗಳು ಭೀಮರೆಡ್ಡಿಯನ್ನು ಪರೀಕ್ಷಿಸಲೆಂದು ಜಾತ್ರೆ ಮಹೋತ್ಸವಕ್ಕಾಗಿ ಬೆಲ್ಲವನ್ನು ಕೇಳಿದರು. ಅದಕ್ಕೆ ಅವನು ಕೊಡಲು ನಿರಾಕರಿಸಿದನು. ಬೆಲ್ಲವಿಲ್ಲವೆಂದು ಸುಳ್ಳು ಹೇಳಿದನು. ಇದರಿಂದ ಕೂಪಗೊಂಡ ಗುರುಗಳು ಬಸವ್ವಳನ್ನು ಕುದಿಯುತ್ತಿರುವ ಹಾಲಿನ ಕಡಾಯಿಯಲ್ಲಿ ಜಿಗಿಯುವಂತೆ ಆಜ್ಞಾಪಿಸಿದರು. ಅದಕ್ಕೆ ಬಸವ್ವ ಗುರುವಾಜ್ಞೆಯಂತೆ ಮಾಡಿದಳು. ಆಗ ಕುದಿಯುವ ಹಾಲಿನ ಕೆಲವೊಂದು ಹನಿಗಳು ಭೀಮರೆಡ್ಡಿಯ ಮೇಲೆ ಬಿದ್ದು ಮೈ ಮೇಲಿಲ್ಲಾ ಬೊಬ್ಬೆ ಎದ್ದವು ಆವಾಗ ಕಾಪಾಡುವಂತೆ ಗುರು ಶಂಭುಲಿಂಗನನ್ನು ಪ್ರಾರ್ಥಿಸಿದನು. ಬೊಬ್ಬೆಯಲ್ಲಿ ಎಲ್ಲ ಮಾಯವಾಗಿ ಬಸವ್ವ ಕಡಾಯಿಯಿಂದ ಹೊರ ಬಂದಳು ಭೀಮರೆಡ್ಡಿ ಬೆಲ್ಲವನ್ನು ಆಶ್ರಮಕ್ಕೆ ತಲುಪಿಸುವುದಾಗಿ ಒಪ್ಪಿಕೊಂಡನು. ಆಗ ಬಸವ್ವ ಭೀಮರೆಡ್ಡಿ ನಿನ್ನ ಪಾಪ ನಾಶವಾಯಿತು. ಮುಂದೆ ನಿನ್ನ ಮನೆ ಎತ್ತರೆತರಕ್ಕೆ ಬೆಳೆದು ಪ್ರಸಿದ್ಧವಾಗಲಿ ಎಂದು ಆರ್ಶಿವಚನ ನೀಡಿದಳು.

ಶಂಭುಲಿಂಗನ ಪವಾಡಗಳು

ಶರಣೆ ಶಂಭುಲಿಂಗ ಮತ್ತು ಬಸವ್ವರಿಬ್ಬರು ಆಯಾಸಗೊಂಡು ವಿಶ್ರಮಿಸುತ್ತಿರಲು ಹುಮನಾಬಾದ ಗುಲ್ಬರ್ಗಾ ಮಾರ್ಗಹೂಗುವ ವಾಹನ ಒಂದು ಬಂದಿತ್ತು. ಆ ವಾಹನದಲ್ಲಿ ಹೋಗುವಂತೆ ಗುರುಗಳ ಅಪ್ಪಣೆ ಪಡೆದು ಕಂಡಕ್ಟರನನ್ನು ಕೇಳಿದಳು. ನಾವು ಹುಮನಾಬಾದಗೆ ಹೋಗಬೇಕು ನಮ್ಮಲ್ಲಿ ದುಡ್ಡಿಲ್ಲ ಎಂದು ಬಸವ್ವ ಕಂಡಾಕ್ಟರನಿಗೆ ಹೇಳಿದಳು. ಅದಕ್ಕೆ ಕಂಡಾಕ್ಟರ್ ಇದು ಗದಗ ಮೋಟಾರ ಸರ್ವಿಸನೂರ್ ಗಾಡಿ" ಪುಕಟೆ ಒಯ್ಯಾಕ ಆಗಲ್ಲ ಎಂದು ಹೇಳುತ್ತಾನೆ. ಆಗ ಅಪ್ಪನವರನ್ನು ಕರೆದೊಯದ ಗಾಡಿ ಮುಂದಕ್ಕೆ ಹೋಗುವುದಿಲ್ಲ. ಮತ್ತೆ ವಾಪಸ ಬಂದು ಶಂಭುಲಿಂಗನಲ್ಲಿ ಕ್ಷಮೇಯಾಚಿಸಿದನು.

ಶರಣರನ್ನು ವಾಹನದಲ್ಲಿ ಕರೆದೊಯ್ಯಲಾಯಿತ್ತು. ಈ ರೀತಿಯಾಗಿ ಅಹಂಭಾವವನ್ನು ಸೌಜನ್ಯ ತಾಳ್ಮೆಯಿಂದ ಬಗೆಹರಿಸುವ ಬಗೆಯನ್ನು ಜಗಕ್ಕೆ ತಿಳಿಸಿದ ಮಹಾನ ಪುರುಷರಾಗಿದ್ದರು.

ಅಂಬಿಗನ ದುರಾಸೆ

ಒಂದು ದಿವಸ ಶಂಭುಲಿಂಗ ಮತ್ತು ಬಸಪ್ಪ ಲೋಕ ಸಂಚಾರಕ್ಕೆ ಹೋಗಿ, ಮರಳಿ ಆಶ್ರಮಕ್ಕೆ ಬರುತ್ತಿರುವಾಗ ದಾರಿ ಮಧ್ಯದಲ್ಲಿ ನಾರಂಜಾ ನದಿ ಕಾಲುವೆ (ಹಳ್ಳ) ಜೋರಾಗಿ ಸುರಿಯುತ್ತಿರುವ ಮಳೆಯಿಂದಾಗಿ ತುಂಬಿ ಹರಿಯುತ್ತಿತ್ತು. ದಡ ಸೇರುವುದು ಅಸಾಧ್ಯವಾಗಿತ್ತು. ಆಗ ಅಂಬಿಗನನ್ನು ನದಿಯ ಆ ದಡ ಸೇರಿಸುವಂತೆ ಕೇಳಿಕೊಂಡರು. ಏನಪ್ಪಾ ನಮ್ಮನ್ನು ಆ ದಡಕ್ಕೆ ಸೇರಿಸುತ್ತಿಯೊ? ಎಂದಗಾ ಅಂಬಿಗ ದುಡ್ಡು ಹೆಚ್ಚಿಗೆ ಕೊಡುವುದಾದ್ರೆ ನಿಮ್ಮನ ಆ ದಡ ಸೇರಿಸುತ್ತಿನಿ ಎಂದನು. ಹಳ್ಳ ಮಧ್ಯದಲ್ಲಿ ಏನಾದ್ರು ಆದ್ರೆ ನಾನು ಜವಾಬ್ದಾರನಲ್ಲ ಎಂದು (ಖಡಾ ಕಠೋರವಾಗಿ ಖಂಡಿತವಾಗಿ) ನುಡಿದನು. ಶಂಭುಲಿಂಗ ಸ್ವಾಮಿಗಳು ಗಂಗಾ ಮಾತೆಯನ್ನು ಪ್ರಾರ್ಥಿಸಿ ದಾರಿ ಬಿಡುವಂತೆ ಕೇಳಿಕೊಂಡರು. ಆಗ ತುಂಬಿ ಹರಿಯುವ ನದಿಯು ಕವಲೊಡೆದು ಇಬ್ಭಾಗವಾಯಿತು. ಮಧ್ಯದಲ್ಲಿ ದಾರಿಯಾಗಿ ದಡವನ್ನು ಸೇರಿದರು. ಅದನ್ನು ನೋಡಿ ಆಶ್ಚರ್ಯ ಚಕಿತನಾದ ಅಂಬಿಗ ತನ್ನ ಕಣ್ಣುಗಳನ್ನು ಕಳೆದುಕೊಂಡನು.

ಈ ರೀತಿಯಾಗಿ ಶಂಭುಲಿಂಗ ಸ್ವಾಮಿಯು ಸತ್ಯದ ದಾರಿಯನ್ನು ಸಮಾಜದಲ್ಲಿದ್ದುಕೊಂಡು ಸಾಮಾನ್ಯ ಮನುಷ್ಯನಾಗಿ ಉಳಿದಕೊಂಡು ತೋರಿಸಿದರು. ಸಮಾಜದಲ್ಲಿ ಶಾಶ್ವತವಾಗಿರುವುದೊಂದೇ,ಅದುವೆ ಸತ್ಯ. ಪ್ರತಿಯೊಬ್ಬರು ಆ ಮಾರ್ಗದಲ್ಲಿ ನಡೆದುಕೊಳ್ಳಬೇಕಾಗಿರುವುದು ಶರಣರ ಆಶಿರ್ವಚನವಾಗಿದೆ. ಅಂಹಕಾರ, ದುರಾಸೆ, ಅಹಂಬಾವ ಜನರಿಗೆ ಸನ್ಮಾರ್ಗ ತೋರಿಸುವ ನೀತಿ ಮುಂತಾದವುಗಳು ಮಾತ್ರ ಬದುಕಿನ ನೇಮ್ಮದಿಗೆ ಸಹಕಾರಿಯಾಗಿವೆ ಎಂದಿದ್ದಾರೆ.

ಜಾತ್ರೆ ನಿಶೇಧ ಮಾಡಿದುದು

ನಿಜಾಂ ಸರಕಾರದಿಂದ ಆದೇಶ ಹೊರಡಿಸಲಾಗಿತ್ತು. ಯಾವ ಹಳ್ಳಿಯಲ್ಲಿಯೂ ಜಾತ್ರಾ ಮಹೋತ್ಸವ ಮಾಡಕೂಡದು ಎಂಬ ಆದೇಶ ಉರಿನ ಜನರೆಲ್ಲ ವಿರೋಧಿಸಿದರು. ಆದರೆ ಅಪ್ಪನವರು (ಶಂಭುಲಿಂಗ ಸ್ವಾಮಿಗಳು) ಅಮೀನನ ಖಾಯಿಲೆಯನ್ನು ಗುಣಮುಖ ಮಾಡಿದರು. ಇದರಿಂದ ಸಂತೋಷಗೊಂಡ ಅಮೀನ ಜಾತ್ರೆ ಮಾಡಲು ಅನುಮತಿ ನೀಡುವಂತೆ ನಿಜಾಂ ಸರ್ಕಾರದಿಂದ ಆದೇಶ ತಂದನು. ಜಾತ್ರೆ ಮಾಡವಂತೆ ಅವಕಾಶ ಕಲ್ಪಿಸಿಕೊಟ್ಟನು. ಉರಿನ (ಜನರೆಲ್ಲ ಸೇರಿ) ಭಕ್ತ ಸಮುಹವೆಲ್ಲ ಸೇರಿಕೊಂಡು ಶ್ರದ್ಧೆ ಆಸಕ್ತಿಯಿಂದ ಜಾತ್ರೆಯನ್ನು ವಿಜ್ರಂಭಣೆಯಿಂದ ಆಚರಿಸಿದರು.

ಅಪ್ಪನವರ ಅಜ್ಞೇಯಂತೆ "ನೋರಂದಪ್ಪನವರ ಮನೆಯಿಂದಲೆ ಥರ ಬರಬೇಕೆಂದಿತ್ತು" ಇಂದಿಗೂ ಪ್ರತಿ ವರ್ಷ ಸಂಕ್ರಮಣದ ಹಬ್ಬದ ಮರುದಿನ ಜಾತ್ರೆ ನಡೆಯುತ್ತದೆ. ಥೆರು ನೂರಂದಪ್ಪನವರ ಮನೆಯಿಂದಲೆ ಪ್ರಾರಂಭವಾಗುತ್ತದೆ. ಈ ಜಾತ್ರೆಗೆ ಕಣ್ಣಿನ ಸೆಳೆಯುವರು. ಜನ ವಿಜ್ರಂಬಣೆಯಿಂದ ಜಾತ್ರೆ ಆಚರಿಸುತ್ತಾರೆ. ಶರಣರ ಮಹಿಮಯನ್ನೇ ಭಜನ ಕೀರ್ತನೆಗಳಿಂದ ಕೂಂಡಾಡುತ್ತಾರೆ.

ಒಬ್ಬ ಭಕ್ತ ಲಿಂಗ ದೀಕ್ಷೆಯನ್ನು ಕೊಡುವಂತೆ ಪರಿ – ಪರಿಯಾಗಿ ಬೇಡಿಕೊಂಡನು. ಆದರೆ ಲಿಂಗ ದೀಕ್ಷೆ ಪಡೆಯುವ ಯೋಗ್ಯತೆ, ಪಕ್ವತೆ ನಿನ್ನಲಿಲ್ಲ ಎಂದು ನುಡಿದರು. ಆದರಿಂದ ಕುಪಿತನಾದ ಭಕ್ತ ಜಾತ್ರೆಯಲ್ಲಿ ಕುದಿಯುತ್ತಿರುವಕಡಾಯಲ್ಲಿ ದುಮುಕಿ ಮರಣ ಹೊಂದಿದನು. ಅವನನ್ನು ಅಲ್ಲಿಯೇ ಸಮಾಧಿ ಮಾಡಲಾಯಿತ್ತು. ಅಮೀನಸಾಬ್ ಬಂದು ವಿಚಾರಣೆ ನಡೆಸಿದ್ದರು.

ಆಗ ಶಂಭುಲಿಂಗ ಸ್ವಾಮಿಯ ಮಹಿಮೇಯ ಅರಿವಾಯಿತು. ಅಲ್ಲಿ ಅಮೀನ ಸಾಹೇಬ್ ಸ್ವಾಮಿಗೆ ಶರಣಾಗತನಾದನು. ಕೊನೆಗೆ ಸ್ವಾಮಿಗಳು ತಮ್ಮ ಕೊನೆಗಳಿಗೆಯ ಬಗ್ಗೆ ಭಕ್ತರಿಗೆ ತಿಳಿಸಿದರು.

## ಮಕರ ಸಂಕ್ರಾಂತಿಯ ಜಾತ್ರೆಯ ಸಿದ್ಧತೆ

ಮಕರ ಸಂಕ್ರಾಂತಿಯ ಜಾತ್ರೆಯನ್ನು ಸಿದ್ಧತೆ ಮಾಡಿಕೊಳ್ಳುಬೇಕೆಂದು ಭಕ್ತಾದಿಗಳು ಶಂಭುಲಿಂಗ ಆಶ್ರಮದ ಕಡೆ ಧಾವಿಸಿದರು. ಅಲ್ಲೊಂದು ಆಶ್ಚರ್ಯಕರ ಸನ್ನಿವೇಶವೊಂದು ಕಂಡಿತು. ಇಲ್ಲಿ – ಹೆಗ್ಗಣಗಳು ಶಂಭುಲಿಂಗರ ದೇಹವನ್ನು ಹರಿದು ತಿನ್ನುತ್ತಿದ್ದವು. ಆದರೆ ಅಪ್ಪನವರು ಏನು ಮಾಡದೇ ಸುಮ್ಮನಿರುವುದನ್ನು ಕಂಡು ಭಕ್ತರು ಇಲ್ಲಿಗಳನ್ನು ಹೆಗ್ಗಣಗಳನ್ನು ಓಡಿಸಲಾರಂಭಿಸಿದರು. ಆಗ ಶಂಭುಲಿಂಗ ಸ್ವಾಮಿಗಳು ಹೊಡಿಬಾಡ್ರಪ್ಪ ! ಅವುಗಳನ್ನ್ ಯ್ಯಾಕ ಹೊಡಿತ್ರಿ ಅವು ನನ್ನ ದೇಹ ತಿಂದು ಅನಂದ ಪಡಿಲಿ “ಎಲ್ಲರೂ ಕೂಟ್ಟ ಹೊಗೇಬೇಕು. ಯಾರು ಇಟ್ಕೊಂಡ ಹೊಗಬಾರದು. ಇಟ್ಕೋಂಡರೆ ಇಟ್ಕೋಂಡು ಹೊದಾ ಅಂತಾರೆ. ಕಟ್ಕೋಂಡು ಹೊದರೆ ಕಟ್ಕೋಂಡು ಹೊದಾ ಅಂತಾರೆ. ಇಂವ ನಿಮ್ಮನ್ನು ಬಿಟ್ಟರು, ಇವನ್ನ ನೀವು ಬಿಟ್ರೇನು ? ಎಂದು ಪ್ರಶ್ನಿಸಿದರು. ಶಿವನ ಹೆಸರು ಹೇಳುತ್ತಲೆ ಲಿಂಗದಲ್ಲಿ ಲೀನವಾದರು. ಈ ಸುದ್ದಿಯನ್ನು ತಿಳಿದ ಶರಣೆ ಬಸವ್ವ ಕೂಡ ಗುರುಭಕ್ತಿಯಲ್ಲಿ ಲೀನವಾದಳು. ಹೀಗೆ ಗುರು – ಶಿಷ್ಯ ಒಂದಾದ ಭಕ್ತಿ ಲೋಕ ಕಲ್ಯಾಣಕೆ ಹಿತವಾಗಿಪ್ಪುದು ಮುಕ್ತಿ ಎಂದು ಹೇಳಬಹುದು.

# ಡೋಂಣಗಾವ ಹಾವುಗೆ ಮಠ

ಬೀದರ ಜಿಲ್ಲೆಯ ಔರಾದ ತಾಲೂಕುನಲ್ಲಿರುವ ಪುಣ್ಯ ಕ್ಷೇತ್ರವೆ ಡೊಂಣಗಾವ ಔರಾದ ತಾಲೂಕು ಪ್ರದೇಶದಲ್ಲಿ ಬರುವ ಗ್ರಾಮವಿದೆ.ಅದು ಅಭಿವೃದ್ಧಿ ಕಾರ್ಯದಿಂದ ದೂರವಾಗಿದೆ. ಆದರು ಔರಾದ ತಾಲೂಕಿನಲ್ಲಿ ಶರಣರು ಪವಾಡ ಪುರುಷರಾಗಿದ್ದಾರೆ. ಅವುಗಳಲ್ಲಿ ಪ್ರಮುಖವಾಗಿ ಡೊಂಣಗಾವ, ಸಂತಪೂರ, ಹೆಡಗಾಪೂರ, ಕುಸನೂರ; ಮುಧೋಳ, ಮುಂತಾದ ಸ್ಥಳಗಳು ಶರಣರ ಬಿಡಾಗಿವೆ. ಇವುಗಳ ಬಗೆಗೆ ವಿಷಯಗಳು ಅತ್ಯೇಲ್ಪವಾಗಿದೆ. ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿದೆ. ಲಭ್ಯವಿರುವ ಮಾಹಿತಿಯ ಆಧಾರದ ಮೇಲೆ ಕ್ರಿರು ಪರಿಚಯ ಕೊಡುವ ಪ್ರಯತ್ನನ ಇಲ್ಲಿ ನಡೆದಿದೆ.

ಡೊಂಣಗಾವ ಔರಾದ ತಾಲೂಕಿನಿಂದ ೩೦ ಕಿ.ಮೀ. ದೂರದಲ್ಲಿ ಕಮಲನಗರ ಮಾರ್ಗದ ಮಧ್ಯದಲ್ಲಿದೆ. ಈ ಗ್ರಾಮದಲ್ಲಿ ಜನರು ಶಾಂತಿ ನೆಮ್ಮದಿಯ ಜೀವನ ನಡೆಸುವುರು ಈ ಗ್ರಾಮವು ಧಾರ್ಮಿಕ ನೆಲೆಬೀಡಾಗಿದ್ದು ಸಾಮಾಜಿಕ, ಆರ್ಥಿಕ, ಚಟುವಟಿಕೆಗಳು ಕ್ರಿಯಾಶೀಲವಾಗಿವೆ. ಈ ಗ್ರಾಮದಲ್ಲಿರುವ ಹಾವುಗೆ ಶರಣರ ಹಿರೆಮಠ ಅಂತ್ಯಂತ ಪ್ರಾಚೀನ ಘಟನೆಯ ಮಹತ್ವ ಪಡೆದುಕೊಂಡಿದೆ.

ಮಹಾಭಾರತದ ದಂಡಕಾರಣ್ಯ ಪ್ರದೇಶವೆಂದು ಐತಿಹಾಸಿಕ ಹಿನ್ನಲೆ ಪಡೆದುಕೊಂಡ ಈ ಗ್ರಾಮವು ದಕ್ಷಿಣ ಭಾರತದಲ್ಲಿ ಅಧರ್ಮ, ಅನೀತಿ. ಆಚಾರ–ವಿಚಾರವಿಲ್ಲದ ಜನರಿದ್ದರು. ಇದನ್ನು ಸರಿಪಡಿಸಲ್ಲಿಕ್ಕೆ ಆದಿಗುರು ರೇಣುಕಾಚಾರ್ಯರಿಂದ ಪ್ರೇರಿತರಾಗಿ ಈ ಭಾಗದ ಸಾಮಾಜಿಕ, ಧಾರ್ಮಿಕ ಉನ್ನತಿಗಾಗಿ ಶ್ರೀ.ಶ್ರೀ.ಶ್ರೀ. ವಿರುಪಾಕ್ಷ ಶರಣರು ದೇಶ ಸಂಚಾರ ಮಾಡುತ್ತಾ ಡೊಂಣಗಾಂವ ಗ್ರಾಮಕ್ಕೆ ಬಂದು ನೆಲೆನಿಂತರು. ಈ ಗ್ರಾಮದ ಪ್ರಾಚೀನ ಹೆಸರು ದ್ರೋಣಾಪುರ. ಇಲ್ಲಿಯೇ ಪೂಜೆ ಪುನಸ್ಕಾರಗಳನ್ನು ಮಾಡುತ್ತಾ ಭಕ್ತಾರನ್ನು ಸನ್ಮಾರ್ಗದ ಕಡೆ ಕೊಂಡೊಯುವಂತಹ ಕಾರ್ಯ ಮಾಡುತ್ತಿದ್ದರು. ಈ ಭಾಗದ ಜನರನ್ನು ಅಧರ್ಮದಿಂದ ಧರ್ಮದ ಕಡೆಗೆ, ಕತಲೆಯಿಂದ ಬೆಳಕಿನ ಜ್ಞಾನದ ಕಡೆ ಕೊಂಡೊಯುತ್ತಿದ್ದರು. ಇವರ ಈ ಕಾರ್ಯವನ್ನು ಮೆಚ್ಚಿಕೊಂಡ ಪ್ರಮುಖ ಮೂವರು ಶಿಷ್ಯರನ್ನು ಗುರುತಿಸಬಹುದು.

೧) ಮಾಳಪ್ಪಯ್ಯಾ

೨) ಚನ್ನ ಮಲ್ಲಪ್ಪ

೩) ಮಡಿವಾಳಪ್ಪ.

ಈ ಮೂವರು ಶಿಷ್ಯರು ಶ್ರೀ ವಿರುಪಾಕ್ಷ ಶರಣರೊಂದಿಗೆ ಉಳಿದುಕೊಂಡು ಧರ್ಮ ಕಾರ್ಯದಲ್ಲಿ ತೊಡಗಿಕೊಂಡಿದ್ದರು.

೧) ಮಾಳಪ್ಪಯ್ಯ

ಇವರು ಈಗಿನ ಮಹಾರಾಷ್ಟದ ದೇಗಲೂರು ತಾಲೂಕಿನ ಹಣೆಗಾಂವ ಗ್ರಾಮದವರಾಗಿದ್ದರು. ಅವರು ದಿನನಿತ್ಯ ದನ – ಕರುಗಳನ್ನು ಮೇಯಿಸುತ್ತಾ ಡೋಣಗಾಂವ ಗ್ರಾಮದ ಭಕ್ತಮುಡಿ ಎಂಬಲ್ಲಿ ಗುರುಗಳು ತಪೋನಿಷ್ಠರಾಗಿದ್ದಾಗ ದಿನಾಲು ಇಲ್ಲಿಗೆ ಬಂದು ಪೂಜೆ ಪುನಸ್ಕಾರಗಳು ಮತ್ತು ಗುರುಗಳ ಸೇವೆಯನ್ನು ಮಾಡಿ ಮತ್ತೆ ದನ ಕರುಗಳನ್ನು ತೆಗೆದುಕೊಂಡು ಹಣ್ಣೆಗಾಂವಕ್ಕೆ ಹೋಗುತ್ತಿದ್ದರು.

ಹೀಗೆ ತನ್ನ ಕಾಯಕದಲ್ಲಿ ನಿಷ್ಠಾವಂತನಾಗಿದ್ದಾಗ ಗುರುಗಳು ಮಾಳಪ್ಪಯ್ಯಾನವರನ್ನು ಆಶಿರ್ವದಿಸಿ ಧರ್ಮ ಪ್ರಚಾರ ಮಾಡುವ ಕುರಿತು ಉಪದೇಶವನ್ನಿತ್ತರು. ಈ ಕಾರ್ಯಕ್ಕಾಗಿ ತಮ್ಮನ್ನು ತೊಡಗಿಸಿಕೊಂಡ ಮಾಳಪ್ಪಯ್ಯಾ ಗುರುಗಳ ಶಿಷ್ಯನಾದನು. ಈ ರೀತಿಯಾಗಿ ಪ್ರಾಮಾಣಿಕ ದೃಢವಾದ ಭಕ್ತಿಯಿಂದಾಗಿ ಲೋಕ ಕಲ್ಯಾಣ ಕಾರ್ಯದಲ್ಲಿ ತೊಡಗಿಸಿಕೊಂಡ ಶಿಷ್ಯನ ಚರಿತ್ರೆ ಅವಿಸ್ಮರಣಿಯವಾಗಿದೆ.

೨) ಚನ್ನ ಮಲ್ಲಪ್ಪಾ

ಇವರು ವಿರುಪಾಕ್ಷ ಸ್ವಾಮಿಗಳ ಶಿಷ್ಯರಲ್ಲಿ ಒಬ್ಬರಾಗಿದ್ದು ಗುರುಗಳ ಸೇವೆಯನ್ನು ಮಾಡುತ್ತಾ ಅನೇಕ ಪವಾಡಗಳನ್ನೆ ಮಾಡುತ್ತಾ ಪವಾಡ ಪುರುಷರೆನ್ನಿಸಿದ್ದರು. ಇವರು ಕಾಯಕದಲ್ಲಿ ಹಿಟ್ಟುಬೀಕ್ಷೆ ಬೇಡುವವರಾಗಿದ್ದರು.

ಒಂದು ದಿವಸ ಹಿಟ್ಟು ಬೇಡವ ಕಾಯಕದಲ್ಲಿದ್ದಾಗ ಒಂದು ಮನೆಗೆ ಹೋಗಿದ್ದರು. ಆಗ ಆ ಮನೆಯ ಗೃಹಿಣಿಯೊಬ್ಬಳಿಂದ ಹಿಟ್ಟನ್ನು ಪಡೆದು "ಸೌಭಾಗ್ಯವತಿ" ಎಂದು ಆಶಿರ್ವಾದ ನೀಡಿದರು. ಆದರೆ ಆ ಗೃಹಿಣಿ ತನ್ನ ಗಂಡನಿಲ್ಲವೆಂಬ ವಿಚಾರವನ್ನು ತಿಳಿಸಿ ಶೋಕಿಸುತ್ತಾಳೆ. ಇರುವ ನಿಜ ಸಂಗತಿಯನ್ನು ಗುರುಗಳಿಗೆ ತಿಳಿಸುತ್ತಾಳೆ. ಆಗ ಗುರುಗಳು "ನಿನ್ನ ಗಂಡ ಸತ್ತಿಲ್ಲ., ಜೀವಂತನಾಗಿದ್ದಾನೆ. ಬೇಕಾದರೆ ನೀನು ಹೋಗಿ ನೋಡು ಎಂದು ಹೇಳಿದ್ದರು. ಆಗ ನಿಜವಾಗಿಯಾ ಆ ಗೃಹಿಣಿಯ ಗಂಡ ಜೀವಂತವಾಗಿದ್ದನು.

ಈ ಪವಾಡವನ್ನು ಕಂಡ ನೆರಮನೆಯ ಗೃಹಿಣಿಯೊಬ್ಬಳು ಗುರುಗಳನ್ನು ಪರೀಕ್ಷಿಸಲು ಮನೆಗೆ ಹಿಟ್ಟಿಗೆಂದು ಬಂದಾಗ, "ನನ್ನ ಗಂಡ ಇಲ್ಲವೆಂದು ಸುಳ್ಳು ಹೇಳಿದ್ದಳು. ಗಂಡ ಜೀವಂತನಾಗಿರುವುದು. ಗುರುಗಳಿಗೆ ತಿಳಿದಿತ್ತು. ಆದರೂ ಗೃಹಿಣಿಯ ಬಯಕ್ಕೆ ಈಡೇರಿಸುವ ಸಲುವಾಗಿ "ನಿನ್ನ ಇಚ್ಛೇಯಂತೆಯೇ ಆಗಲಿ" ಎಂದು ಆಶಿರ್ವದಿಸಿದ್ದರು. ಆಗ ಆ ಗೃಹಿಣಿಯ ಗಂಡ ಇಹಲೋಕ ತ್ಯೇಜಿಸಿದ್ದನು. ಇದರ ಕುರುಹವಾಗಿ ಆ ಗ್ರಾಮಕ್ಕೆ "ರಂಡಿಹಾಳ" ಅಥವಾ ರಂಡ್ಯಾಳ ಎಂಬ ಹೆಸರು ಬಂದಿರುತ್ತದೆ. ಈ ರೀತಿಯಾಗಿ ಶಿವ ಶರಣರನ್ನು ನಿಂದಿಸಿದವರು ಒಂದಲ್ಲ ಒಂದು ಬಗೆಯಲ್ಲಿ ಸಮಸ್ಯೆಗೆ ಒಳಗಾಗುತ್ತಾರೆ. ಯಾರು ಶ್ರದ್ಧೆ – ಆಸಕ್ತಿಯಿಂದ ತಮ್ಮನು ತಾವು ಗುರುವಿನಲ್ಲಿ ತೊಡಗಿಸಿಕೊಂಡಿರುತ್ತಾರೂ. ಅವರಲ್ಲಿ ಗುರುಭಕ್ತಿ ಅಚಲವಾಗಿರುತ್ತದೆಯೋ. ಅಂಥವರ ಕಾರ್ಯಗಳು ಕಲ್ಯಾಣಕರವಾಗಿರುತ್ತವೆ. ಮತ್ತು ಸದಾ ಕ್ರಿಯಾ ಶೀಲಾವಾಗಿರುತ್ತದೆ. ಎಂಬುದರಲ್ಲಿ ಹುರುಳಿಲ್ಲ. ಹೀಗೆ ಚನ್ನ ಮಲ್ಲಿಪ್ಪನವರ ಪವಾಡದಿಂದ ತಿಳಿಯಬಹುದಾಗಿದೆ.

೩) ಮಡಿವಾಳಪ್ಪ.

ಇವರು ಸಹ ಶ್ರೀ ವಿರುಪಾಕ್ಷ ಸ್ವಾಮಿಯವರ ಸೇವೆಯನು ಮಾಡುತ್ತಿದ್ದರು ಈ ರೀತಿಯಾಗಿ ಶಿಷ್ಯರೊಂದಿಗೆ ಕಾರ್ಯ ನಿರಂತರಾಗಿದ್ದಾಗ ಗುರುಗಳು ನಾನು ಬಂದ ಉದ್ದೇಶ ಪೂರ್ತಿಯಾಗಿರುತ್ತದೆ. ಅಧರ್ಮದಿಂದ ಧರ್ಮದೆಡೆಗೆ ಸಾಗಿದ ಈ ನೆಲ ಪುಣ್ಯ ಸ್ಥಾನವಾಗಿರುತ್ತದೆ. ಇಲ್ಲಿ ಧರ್ಮ ನೆಲೆಸಿರುತ್ತದೆ. ಪ್ರಯುಕ್ತ ನಾನಿಲ್ಲಿಂದ ಪ್ರಯಣ ಬೆಳೆಸುವುದಾಗಿ ಗುರುಗಳು ತಿಳಿಸುತ್ತಾರೆ. ಆಗ ಗ್ರಾಮದ ಭಕ್ತ ಸಮುಹವು ಅವರನ್ನು ಅಲ್ಲಿಯೇ ನೆಲೆಸುವಂತೆ ಆಗ್ರಹಿಸುತ್ತಾರೆ. ಗುರುಗಳು ಅದಕ್ಕೆ ಒಪ್ಪದಿದ್ದಾಗ ತಮ್ಮದೆನಾದರು ಕುರುಹು (ನೇನಪಿನ) ಕೊಟ್ಟು ತಮ್ಮ ಸೇವೆ ಮಾಡುವ ಭಾಗ್ಯವನ್ನು ಕರುಣಿಸಬೇಕು ಎಂದು ಭಕ್ತಾದಿಗಳು ಕೇಳಿಕೊಂಡರು. ಆಗ ಗುರುಗಳು ತಮ್ಮ "ಹಾವುಗೆಯನ್ನು ಕೊಟ್ಟರು. ಆದಿನಿಂದ ಶರಣ" ಹಾವುಗೆ ಸ್ವಾಮಿ" ಎಂದಾಗಿಯೇ ಈ ಗ್ರಾಮದಲ್ಲಿ ಪ್ರಚರಿತವಾಗಿದೆ.

ಗುರುಗಳ ನಿರ್ಗಮನದ ನಂತರ ಸೇವೆಯಲ್ಲಿ ನಿರತನಾಗಿದ್ದ ಶಿಷ್ಯ ಮಾಳಪ್ಪಯ್ಯಾ ಭಕ್ತಮುಡಿಯ ತಪೂವನದಲ್ಲಿ ಐಕ್ಯರಾದರು.

ಅವರ ಹೆಸರಿನ ಮೇಲೆ ಭಕ್ತಮೂಡಿಯಲ್ಲಿ ಭವ್ಯ ಮಂದಿರ ವಿರುವುದು ಐತಿಹಾಸಿಕ ಹಿನ್ನೆಲೆಗೆ ಸಾಕ್ಷಿಯಾಗಿದೆ. ಇಂದಿಗೂ ಅನೇಕ ಭಕ್ತಾದಿಗಳು ಈ ಮಂದಿರಕ್ಕೆ ಬಂದು ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುತ್ತಾರೆ. ಪ್ರಸ್ತುತ ಇದೊಂದು ಪುಣ್ಯ ಕ್ಷೇತ್ರವಾಗಿದೆ. ಹೀಗಾಗಿ ಗುರು ಶಿಷ್ಯನ ಭಕ್ತಿ ಮುಕ್ತಿಗೆ ಮಾರ್ಗವಾಗಿರುವುದು ತಿಳಿದುಬರುತ್ತದೆ. ಶ್ರೀ ಚನ್ನಮಲ್ಲಪ್ಪನವರು ರಂಡಿಹಾಳ ಗ್ರಾಮದಲ್ಲಿ ಐಕ್ಯರಾದರು. ಈಗಲೂ ಅವರ ಹೆಸರಿನ ಮೇಲೆ ಭವ್ಯವಾದ ಮಂದಿರವನ್ನು ಆ ಸ್ಥಳದಲ್ಲಿ ಸ್ಥಾಪಿಸಲಾಗಿದೆ.

ಶ್ರೀ ವಿರುಪಾಕ್ಷ ಶರಣರ ಇನೊರ್ವ ಭಕ್ತನಾದ ಮಡಿವಾಳಪ್ಪ ಭಕ್ತಮುಡಿಯ ಹೊರ ವಲಯದಲ್ಲಿ ಐಕ್ಯರಾದರು. ಪ್ರಾಚೀನ ಸಂಸ್ಕೃತಿಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು, ಗುರು ಭಕ್ತಿಯು ಆಚರಣೆಯಲ್ಲಿರುವುದು ಈ ನಾಡಿನ ಹೆಮ್ಮೆಯಾಗಿದೆ. ಭಾರತದ ಹಲವಾರು ಪ್ರಣ್ಯ ಕ್ಷೇತ್ರಗಳು ತಮ್ಮದೇಯಾದ ಐಹಿತ್ಯವನ್ನು ಪಡೆದುಕೊಂಡಿರುತ್ತವೆ. ಅದೇ ರೀತಿಯಾಗಿ ಬೀದರ ಜಿಲ್ಲೆಯು ಕೂಡ ಐತಿಹಾಸಿಕ ಪರಂಪರೆಗೆ ಹೆಸರಾಗಿದೆ. ಈ ನಾಡಿನಲ್ಲಿಯು ಶರಣರು ಪವಾಡ ಪುರುಷ್ಯರು ವಿಶೀಷ್ಟ ಜೀವನವನ್ನು ರೂಪಿಸಿಕೊಂಡಿದ್ದಾರೆ. ಅವರು ಹಾಕಿಕೊಟ್ಟ ಮಾರ್ಗದಲ್ಲಿಯೇ ಇಲ್ಲಿನ ಜನರು ಸಾಗುತ್ತಿದ್ದಾರೆ. ಇಂದೊಂದು ಪುಣ್ಯ ಕ್ಷೇತ್ರವಾಗಿ ಮಾರ್ಪಡಿಸಿರುವುದು ಶರಣರ ಕೊಡುಗೆಗಳಲ್ಲಿ ವಿಶಿಷ್ಟವಾಗಿದೆ ಎಂಬುದು ತಿಳಿದು ಬರುತ್ತದೆ.

## ಚನ್ನಬಸವ ಪಟ್ಟದೇವರ ಗವಿಮಠ

ಬೀದರ ಜಿಲ್ಲೆಯು ಹಲವು ಶರಣರು, ಸಾದು – ಸಂತರು ನೆಲೆಸಿದ್ದ ಪವಿತ್ರ ತಾಣಗಳ ನೆಲೆಯಾಗಿದೆ. ಬಿದ್ರಿ ಕಲೆಗೆ ಪ್ರಸಿದ್ಧಿಯಾದ ಬೀದರ ಶರಣ ಸಂಸ್ಕೃತಿ ಹಿಂದು ಮತ್ತು ಮುಸ್ಲಿಂ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡಿರುವ ಜಿಲ್ಲೆಯಾಗಿದೆ. ಬೀದರ ಜಿಲ್ಲೆ ನಿಜಾಮ್ ರಾಜ್ಯದ ಗಡಿಭಾಗದಲ್ಲಿತ್ತು, ಆಗ ಈ ಜಿಲ್ಲೆಯಲ್ಲಿ ಜಹೀರಾಬಾದ, ನಾರಾಯಣಖೇಡ, ಉದಗೀರ, ಅಹ್ಮದಪೂರ, ನಿಲಂಗಾ, ಭಾಲ್ಕಿ, ಔರಾದ ಮತ್ತು ಹುಮನಾಬಾದ ತಾಲ್ಲೂಕುಗಳಿದ್ದವು. ರಾಜ್ಯ ಭಾಷೆ ಉರ್ದುವಾಗಿತ್ತು.

ಕ್ರಿ.ಶ. ೧೧೧೫ ರಲ್ಲಿ ನಿಜಾಮ ರಾಜ್ಯದಲ್ಲಿರುವ ಲಿಂಗಾಯತರು ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಸುಧಾರಣೆಗಾಗಿ ಒಂದು ಸ್ಥಾಯಿಸಮಿತಿ ನಿರ್ಮಾಣ ಮಾಡಬೇಕೆಂದು ಶ್ರೀ ಹಡೆಕರ್ ಮಂಜಪ್ಪನವರು ಸೂಚಿಸಿದ ಠರಾವು ಬೀದರ ಜಿಲ್ಲೆಯ ಇಳಗಿ ಗ್ರಾಮದಲ್ಲಿ ಪಾಸು ಮಾಡಲಾಯಿತು.

ಭಾಲ್ಕಿ ಬೀದರ ಜಿಲ್ಲೆಯ ಒಂದು ತಾಲ್ಲೂಕು ಸ್ಥಳವಾಯಿತು. ಶಾಸನಗಳಲ್ಲಿ ಭಾಲ್ಕಿಯನ್ನು "ಭಲುಂಕೆ" ಎಂದು ಹೆಸರಿಸಲಾಗಿದೆ. ಶಿವಶರಣ ಕುಂಬಾರ ಗುಂಡಯ್ಯಾ ಇದೇ ಸ್ಥಳದವನೆಂದು ಹೇಳಲಾಗಿದೆ. ಆತನ ಹೆಂಡತಿಯ ಹೆಸರು ಕೇತಲ ದೇವಿ ಆತನ ಸ್ಮಾರಕವಾಗಿ ಇಲ್ಲಿ ಕುಂಬೇಶ್ವರ ದೇವಾಲಯವಿದೆ.

ಭಾಲ್ಕಿಯ ಬಲ್ಲುಕೇಶ್ವರ ದೇವಾಲಯವು, ಕ್ರಿ.ಶ. ೧೧೦೦ ರಲ್ಲಿ ಆರನೇಯ ವಿಕ್ರಮಾದಿತ್ಯನ ಕಾಲದಲ್ಲಿಯೇ ನಿರ್ಮಿತವಾಗಿದೆ. ಕುಸುರಿ ಕಲೆ ಶಿಲ್ಪಕಲೆಯ ದೃಷ್ಟಿಯಿಂದ ಈ ಮಂದಿರವು ಅನುಪಮವಾಗಿತ್ತು. ಇದರ ಅವಶೇಷಗಳನ್ನು ಇಂದಿಗೂ ಕಾಣಬಹುದು.

ಭಾಲ್ಕಿಯಲ್ಲಿ ಮಹಾಂತೇಶ್ವರ ಮಠ ಬಂಡಕೇಶ್ವರ ದೇವಾಲಯ, ಸಂಗಮೇಶ್ವರ ದೇವಾಲಯಗಳು ಇವೆ. ಭಾಲ್ಕಿಯ ಹಿರೆಮಠ ಸಂಸ್ಥಾನ ಎಂಟು ನೂರು ವರ್ಷಗಳಿಂದ ನಡೆದು ಬಂದಿರುವುದು ತಿಳಿದು ಬರುತ್ತದೆ. ಇದರ ಶಾಖಾಮಠಗಳು ಅನೇಕ. ಅವುಗಳಲ್ಲಿ ಕಮಲನಗರ ಶಾಖಾಮಠ, ಆಂಧ್ರ ಪ್ರದೇಶ ಕಾರಾಮುಂಗಿ ಮಠ ಹಾಗೂ ಮೋರಗಿ ಮಠಗಳು ಪ್ರಮುಖವಾಗಿವೆ.

### ಜನನ

ಕಮಲನಗರವು ಬೀದರ ಜಿಲ್ಲೆಯ ಔರಾದ ತಾಲ್ಲೂಕಿನ ಒಂದು ಗ್ರಾಮ ಇದರ ಮೊದಲ ಹೆಸರು ಮುರುಘ ಭಾಲ್ಕಿ ಹಿರೇಮಠದ ಶಾಖಾಮಠದ ಸಮೀಪದಲ್ಲಿ ಬುಳ್ಳಾ ಮನೆತನಕ್ಕೆ ಸೇರಿದ್ದ ಮನೆಯಿತ್ತು ಈ ಬುಳ್ಳಾ ಮನೆತನದ ರಾಚಪ್ಪ – ಸಂಗಮ್ಮಾ ದಂಪತಿಗಳಿಗೆ ಒಬ್ಬಳು ಮಗಳಿದ್ದಳು ಕ್ರಿ.ಶ. ೨೨–೧೨–೧೮೯೦ ರಲ್ಲಿ (ಅಪರಿಮಿತ) ಆ ದಂಪತಿಗಳಿಗೆ ಒಂದು ಗಂಡು ಮಗು ಹುಟ್ಟಿತು. ಆ ಮಗುವಿನ ಜನ್ಮ ನಾಮ ಮಹಾರುದ್ರಪ್ಪ ಚಿಕ್ಕಂದಿನಲ್ಲೆ ತನ್ನ ತಂದೆ ತಾಯಿಯನ್ನು ಕಳೆದುಕೊಂಡನು. ಆಗ ಅವರಿಗೆ [illegible] ವರ್ಷ ವಯಸ್ಸು. ಮಹಾರುದ್ರಪ್ಪನವರು ಭಾಲ್ಕಿ ಶಾಖಾಮಠದ ದೇಶಿಕರಾಗಿದ ಶಂಕರಯ್ಯಾ ಸ್ವಾಮಿಯವರ ಪೋಷಣೆಯಲ್ಲಿ ಬೆಳೆದರು.

## ಶಿಕ್ಷಣ

ಮಹಾರುದ್ರಪ್ಪನವರು ಬದ್ಧಿವಂತರಾಗಿದ್ದರು. ಅವರು ಶಿವ ಮಾರ್ತೆಪ್ಪನವರಿಂದ ಮರಾಠಿ, ಸಿದ್ರಾಮಯ್ಯಾ ಸಾಲಿಯವರಿಂದ ಕನ್ನಡ ಕಲಿಯವಾರಂಭಿಸಿದರು. ಮಹಾರುದ್ರಪಪ್ಪವರ ಮಾತೃಭಾಷೆ ಮನೆಯ ಭಾಷೆ ಕನ್ನಡವಾಗಿತ್ತು. ದಿನನಿತ್ಯ ಬೆಳಗಿನ ಜಾವ ಎದ್ದು ಕಂತಿ ಬಿಕ್ಷೆಯನ್ನು ಮನೆ – ಮನೆಯಿಂದ ಬೇಡಿ ತರುವುದು ದಿನನಿತ್ಯದ ಕಾಯಕವಾಗಿತ್ತು. ಇದ್ದಾದ ಮೇಲೆ ಮಠದ ಆಕಳುಗಳನ್ನು ಮೇಯಿಸುವುದು ಮತ್ತೊಂದು ಕಾರ್ಯವಾಗಿತ್ತು.

ಭಾಲ್ಕಿಯ ಮಠಾದ್ಯಕ್ಷರಾಗಿದ ಶ್ರೀ ಸಿದ್ಧಬಸವ ಸ್ವಾಮಿಗಳು ಈ ಮಠದೊಳಗೆ ಎಂಟನೇ ವಯಸ್ಸಿನಲ್ಲಿಯೇ ಅಯ್ಯಾಚಾರ ನಡೆಯಿಸಿ ಮಹಾರುದ್ರಪ್ಪನಿಗೆ "ಚನ್ನಬಸವ"ನೆಂದು ನಾಮಕರಣ ಮಾಡಿದರು.

ಚನ್ನಬಸವ ಪಟ್ಟದೇವರು ವಚನ ಸಾಹಿತ್ಯಕ್ಕೆ ಅಪಾರ ಕೊಡುಗೆ ನೀಡಿದ್ದಾರೆ. ೧೨ನೇ ಶತಮಾನದ ಶಿವಶರಣರು ರಚಿಸಿದ ವಚನಗಳ ಮಹತ್ವವನ್ನು ಸಮಾಜಕ್ಕೆ ಪರಿಚಯಸುತ್ತಾರೆ. ಕಾಯಕವೇ ಕೈಲಾಸವೆಂಬಂತೆ ತಮ್ಮ ವ್ಯಕ್ತಿತ್ವವನ್ನು ರೂಡಿಸಿಕೊಂಡು ಸದಾ ಕಾಯಕದಲ್ಲಿಯೇ ಮಗ್ನರಾಗಿರುತ್ತಿದ್ದರು.

ಚನ್ನ ಬಸವ ಪಟ್ಟದೇವರು ಸಾಮಾಜಿಕ ಸುಧಾರಣೆಗಾಗಿ ಶ್ರಮಿಸಿದರು. ಧಾರ್ಮಿಕ ಶೈಕ್ಷಣಿಕ ಸೇವೆಯನ್ನು ಸಲ್ಲಿಸಿದ್ದಾರೆ. ಅನೇಕ ಶಾಲೆಗಳನ್ನು ಪ್ರಾರಂಭೀಸಿ ಕನ್ನಡವನ್ನು ಬೆಳೆಸಿದ್ದಾರೆ. ನಿಜಾಂ ಸರ್ಕಾರದ ಅಧೀನವಾಗಿದ್ದ ಈ ಭಾಗದಲ್ಲಿ ಕನ್ನಡವನೇ ರಕ್ಷಿಸಿ ಪೋಷಿಸಿದ ಕೀರ್ತಿ ಶ್ರೀಗಳದ್ದಾಗಿದೆ.(ಬಸವಣ್ಣವರಿಂದ ಕ್ರಿ.ಶ. ೧೨ನೇ ಶತಮಾನದಲ್ಲಿ ರಚನೆಗೊಂಡ ಜಗತ್ತಿನಲ್ಲೆ ಸ್ಥಾಪನೆಯಾದ ಮೊದಲ ಪಾಲುಮಠದ (ಅನುಭವ ಮಠಪದ) ಮಾಧರಿಯಲ್ಲೆ ಆಧುನಿಕತೆಯಲ್ಲಿ ರಚನೆಗೊಂಡಿರುವಂತಹ ಅನುಭವ ಮಂಟಪದ ಸ್ಥಾಪಕ ಶ್ರೀ ಚನ್ನಬಸವ ಪಟ್ಟದೇವರಾಗಿದ್ದಾರೆ. ಬಸವ ಕಲ್ಯಾಣ).

## ಅನುಭವ ಮಂಟಪದ ಸ್ಥಾಪನೆ

ಅಖಿಲ ಭಾರತ ಶಿವಾನುಭವ ಸಂಸ್ಥೆ ಧಾರವಾಡ ವತಿಯಿಂದ ೧–೫–೧೯೭೨ ರಲ್ಲಿ "ಶಿವಾನುಭವ ಶಿಕ್ಷಣ ಶಿಬಿರವಿತ್ತು." ಭಾಲ್ಕಿ ಶ್ರೀಗಳು ಆಹ್ವಾನಿತರಾಗಿ ಭಾಗವಹಿಸಿದರು. ಈ ಶಿಬಿರ ಕಲ್ಬುರ್ಗಿ ಜಿಲ್ಲೆಯ ಕಮಲಾಪೂರದಲ್ಲಿ ಪ್ರಾರಂಭಿಸಿದ್ದರು.

ಮುರುಘಾ ಮಠದ ಮಹಾಂತಪ್ಪ, ಪಂಡಿತ ನಾಗಭೂಷಣ ಶಾಸ್ತ್ರೀಗಳು, ಬಸವ ಕಲ್ಯಾಣದ ಅನುಭವ ಮಂಟಪದ ಸ್ಥಿತಿಯ ಬಗ್ಗೆ ಭಾಲ್ಕಿ ಶ್ರೀ ಗಮನಕ್ಕೆ ತಂದರು. ಅವರನ್ನು ಬಸವಕಲ್ಯಾಣಕ್ಕೆ ಕರೆದುಕೊಂಡು ಹೊದರು. ಎತ್ತರವಾದ ಮರಿದೇವರ ಗುಡ್ಡ ಕೆಳಗಡೆ ಬಿಲ್ವವನ, ರುದ್ರಮುನಿ ಗವಿ, ವಿಜ್ಞಾನೇಶ್ವರನ ಗವಿಯ, ಎದುರಗಡೆ ತ್ರಿಪುರಾಂತರಕ ಕರೆಯಿರುವ ವಿಶಿಷ್ಟ ಸ್ಥಳದಲ್ಲಿ ನಿಸರ್ಗ ತಾಣದಲ್ಲಿ ಅನುಭವ ಮಂಟಪದ ಅಪೂರ್ಣ ಸ್ಥಿತಿಯನ್ನು ನೋಡಿ ಭಾಲ್ಕಿ ಸ್ರೀಗಳ ಮನಸ್ಸು ಕರಗಿತ್ತು.

"ನೀವು ಈ ಕಾರ್ಯವನ್ನು ಪೂರ್ಣಗೊಳಿಸಬೇಕು. ಇದು ಇನ್ನಾರಿಂದಲೂ ಸಾಧ್ಯವಿಲ್ಲ ಎಂದು ಮುರುಘಾ ಮಠದ ಮಹಾಂತಪ್ಪನವರು ನುಡಿದರು.

ಈ ಭಾಗದ ಪಟ್ಟದೇವರ ಮೇ. ಘ. ಚ.  ಚನ್ನಬಸವ ಸ್ವಾಮಿ ಹಿರೇಮಠ ಭಾಲ್ಕಿ ಬಸವೇಶ್ವರ ಜಯಂತಿಗೆ ಭಾಲ್ಕಿಯಿಂದ ಪಾದಯಾತ್ರೆಯ ಮೂಲಕ ಬಸವಕಲ್ಯಾಣಕ್ಕೆ ಬಂದು, ಅನುಭವ ಮಂಟಪದ ಕಟ್ಟದದ ಕಾರ್ಯ ಪೂರ್ತಿ ಮಾಡಬೇಕೆಂದು ಅಪ್ಪಣೆ ಮಾಡಿದರು. ಪೂಜ್ಯ  ಚನ್ನಬಸವ ಸ್ವಾಮಿಗಳು ಇದಕ್ಕೆ ವಚನ ಬದ್ಧರಾಗಿ "ಒಡಲಳಿದರು ಹಿಡಿದಾಚಾರವ ಬಿಡಲಾರೆ" ನೆಂಬುದು ಶ್ರೀಗಳ ಛಲ ಈ ಕಾರ್ಯ ಮುಗಿಯುವವರೆಗೂ  ಬಸವಕಲ್ಯಾಣದಲೆ ಇರುತ್ತೇನೆ. ಎಂದು ನಿಶ್ಚೇಯ ಮಾಡಿದರು. ಮುಕ್ತಾಯಕ್ಕನ ಮಾತಿನಂತೆ " ಹಿಡಿದ ವ್ರತ ಬಿಡದಿರಲು, ಅದೇ ಮಹಾ ಜ್ಞಾನದಾಚರಣೆ" ಎಂಬಂತೆ ಅದನ್ನು ಆಚರಣೆಯಲ್ಲಿ ತಂದರು. ಭಾಲ್ಕಿಯಿಂದ ಬಸವಕಲ್ಯಾಣಕ್ಕೆ ಪಾದಯಾತ್ರೆಯಿಂದ  ಹೊದರು. ಅನುಭವ ಮಂಟಪದ  ಸ್ಥಾಪನೆಗಾಗಿ  ಬಸವಕಲ್ಯಾಣದ ಮರಿ ದೇವರ ಗುಡದಲ್ಲಿ  ಕುಳಿತರು.

ಬಸವಕಲ್ಯಾಣದಲ್ಲಿ ೧೬ನೇ ಅಧೀವೇಶನ ಅಖಿಲ ಭಾರತ ವೀರಶೈವ ಮಹಾ ಸಭೆಯ ಅಧ್ಯಕ್ಷರಾದ ಸಂಗನಬಸವ  ಸ್ವಾಮಿಗಳು, ಬಂಧನಾಳ  ಅವರ ಅಧ್ಯಕ್ಷತೆಯಲ್ಲಿ ೧೯೫೫ ರಲ್ಲಿ  ಜಯ ಚಾಮರಾಜ ಒಡೆಯರ ಅವರಿಂದ ಅನುಭವ ಮಂಟಪದ ಶಂಕುಸ್ಥಾಪನೆ ನೇರವೇರಿತ್ತು.

ಕ್ರಿ. ಶ. ೧೯೬೬ ರಲ್ಲಿ ಶ್ರೀ ವಿಶ್ವನಾಥ ರಡ್ಡಿ ಮುದ್ನಾಳ ಅವರು ಹಂಪೆಯಿಂದ ಬಸವಕಲ್ಯಾಣಕ್ಕೆ ಪಾದಯಾತ್ರೆ ಮೂಲಕ ಬಂದು ಬಸವ ಸಮಿತಿಯ ಅಧ್ಯಕ್ಷ ಶ್ರೀ ಬಿ.ಡಿ. ಜತ್ತಿಯವರಿಂದ  ಗುದ್ದಲಿ ಪೂಜೆ ಕಾರ್ಯ ನೇರವೆರಿಸಿದ್ದರು. ಆದರೆ ಅನುಭವ ಮಂಟಪದ ಕಾರ್ಯ ಪೂರ್ಣವಾಗಿರಲ್ಲಿಲ್ಲ.  ಶ್ರೀಗಳು ೧೯೭೨ ರಲ್ಲಿ ಬಸವ ಜಯಂತಿಯಂದು ಮೆರಿದೇವರ ಗುಡ್ಡದಲ್ಲಿ ತಪ್ಪೋನುಷ್ಠಾನಕ್ಕೆ ಕುಳಿತರು.

ಅನುಭವ ಮಂಟಪದ  ಕಟ್ಟಡದ ಬಗ್ಗೆ ಚರ್ಚಿಸಲು ಕ್ರಿ.ಶ. ೩-೬ ೧೯೭೨ ,ರಂದು ಬಸವಕಲ್ಯಾಣದ ಅನುಭವ ಮಂಟಪದ ಪ್ರಾಗಣದಲ್ಲಿ ಶ್ರೀಗಳ ಅಧ್ಯಕ್ಷತೆಯಲ್ಲಿ ಸಭೆ ಜರುಗಿತ್ತು ಈ ಸಭೆಯ ಕೊನೆಯಲ್ಲಿ  ಶ್ರೀ ವಿಶ್ವನಾಥರಡ್ಡಿ ಮುದ್ನಾಳ ಮತ್ತು ಶ್ರೀ ಸಿದ್ರಾಮಪ್ಪ  ಖೂಬಾ ಅವರ ಪ್ರಶ್ನೆಗಳಿಗೆ ಉತ್ತರಸುತ್ತಾ ಪೂಜ್ಯ ಚೆನ್ನಬಸವ  ಪಟ್ಟದೇವರು "ನಾನು ಪೂರ್ಣ ಕೆಲಸ ಮುಗಿಸುವವರೆಗೆ ಇಲ್ಲಿ ಅನುಷ್ಠಾನ ಮಾಡುವೆ. ಹನ್ನೇರಡು ವರ್ಷಗಳಾದರೂ ಆಗಲಿ, ನನ್ನ ಪ್ರಾಣವಾದರು ಹಾರಲಿ  ಇಲ್ಲಿಯ ಈ ಕಾರ್ಯ.ಪೂರ್ಣಗೊಳಿಸಿಯೇ ತಿರುತ್ತೇನೆ ಎಂದರು.

ಚೆನ್ನಬಸವ ಪಟ್ಟದೇವರ  ಗದ್ದುಗೆ

ಮೈನಳ್ಳಿಯಲ್ಲಿ ಚನ್ನಬಸವೇಶ್ವರ  ಮೂಲ ಕರ್ತೃ ಗದ್ದುಗೆಯಿದೆ. ಇಲ್ಲಿಯೇ ಭಾಲ್ಕಿಯ ಶಾಖಾಮಠವಿದೆ.  ಮೂಲ ಗುರುಗಳಾದ  ಚನ್ನಬಸಪ್ಪನವರು ಕ್ರಿ.ಶ. ೨೦೦೨ ಇಲ್ಲಿಯೇ ಲಿಂಗೈಕ್ಯರಾಗಿದ್ದಾರೆ. ಈಗ ಚನ್ನಬಸವೇಶ್ವರ ಸಮಾದಿಯ ಮೆಲೆ ಭವ್ಯ ಗುಡಿಕಟ್ಟಲಾಗಿದೆ. ಅದರ ಬಲಭಾಗದಲ್ಲಿ ನೀರಿನ ಹುಂಡವಿದೆ. ಅದನ್ನು 'ಚನ್ನಬಸಪ್ಪನ ಹುಂಡಾ' ಎನ್ನುವರು. ಹುಂಡದ ಆಚಗೆ ಈಚೆಗೆ  ಹೌದುಗಳನ್ನು ಕಟ್ಟಲಾಗಿದೆ. ನೀರು ಹೊಲಸಾಗಬಾರದೆಂದು ಹೊರಗೇ ಸ್ನಾನಮಾಡುವರು. ಗುಡಿಯ ಮುಖ ಉತ್ತರ ದಿಕ್ಕಿಗಿದೆ.  ಉಗಾದಿಗೆ ಜಾತ್ರೆ  ನೆರವೇರುತ್ತದೆ. ಹೂವಿನ ಗಿಡಗಳು, ಆಲದಗಿಡ, ಎರಡು ಹುಣಿಸೆ ಮರಗಳೂ ಇವೆ.

## ಗೊಗ್ಗವ್ವೆ

ಶಿವಭಕ್ತರಿಗೆ ಧೂಪವನ್ನರ್ಪಿಸುವ ವೃತ್ತಿಯ ಗೊಗ್ಗವ್ವೆ ಕೇರಳದ ಅವಲೂರು ನಿವಾಸಿ, ಕೊಡುಗಲೂರು ದೊರೆ ಚೇರಮ ನಂದಿಯರ ಸಮಕಾಲೀನ ಶರಣೆ. ಗೊಗ್ಗವ್ವೆ, ಬೊಂತಾದೇವಿ, ಅಕ್ಕ ಮಹಾದೇವಿಯಂತೆ ವಿರಾಗಿಣಿ. ಬಾಲ್ಯದಿಂದಲೇ ಶಿವಭಕ್ತೆಯಾಗಿದ್ದ ಈಕೆಯನ್ನು ತಂದೆ ತಾಯಿಗಳು ಮದುವೆಗೆ ಒತ್ತಾಯಿಸಿದಾಗ, ವಿವಾಹ ಬಂಧನವನ್ನೇ ತಿರಸ್ಕರಿಸಿ ಸ್ಥಳೀಯ ಗೊಗ್ಗಯ್ಯನ ಮಂದಿರ ಸೇರಿದಳು. ಗೊಗ್ಗಯ್ಯನಿಗೆ ಪೂಜೆ ಸಲ್ಲಿಸುವ, ಧೂಪ ಅರ್ಪಿಸುವ ಕಾಯಕ ಕೈಗೊಂಡ ಈಕೆಗೆ 'ಧೂಪದ ಗೊಗ್ಗವ್ವೆ' ಎಂಬ ಹೆಸರು ಪ್ರಾಪ್ತವಾಯಿತು. ಗೊಗ್ಗವ್ವೆಯ ನಿಷ್ಠೆ ಪರೀಕ್ಷಾರ್ಥ ಶಿವನು ಸ್ಫುರದ್ರೂಪಿ ಯುವಕನ ವೇಷದಲ್ಲಿ ಬಂದು ಮದುವೆಯಾಗಲು ಎಷ್ಟೇ ಒತ್ತಾಯಿಸಿದರೂ ಈಕೆ ಒಪ್ಪಲಿಲ್ಲ. ಈಕೆಯ ಭಕ್ತಿ ಮೆಚ್ಚಿ ಶಿವನು ಕಲ್ಯಾಣ ಕೈಲಾಸದ ಮಾರ್ಗ ತೋರಿಸಿ ಹರಸುತ್ತಾನೆ.

ಒಮ್ಮೆ ಚೇರಮರಾಯ ಕೈಲಾಸಕ್ಕೆ ಹೋಗುವ ದಾರಿ ಹುಡುಕುತ್ತ ಹೊರಟಾಗ, ಅವನಿಗೆ ಆತ್ಮಲಿಂಗದ ಸ್ವರೂಪವನ್ನು ಬೋಧಿಸಿ ಧೂಪದ ಹೊಗೆಯ ಮೂಲಕ ಕೈಲಾಸದ ದಾರಿ ತೋರಿಸಿದಳೆಂದು ಕವಿಸಿದ್ಧ ನಂಜೇಶನು ತನ್ನ 'ಗುರುರಾಜ ಚಾರಿತ್ರ'ದಲ್ಲಿ ಉಲ್ಲೇಖಿಸಿದ್ದಾನೆ. ಮುಂದುವರಿದು–

"ಭವರಹಿತೆ ಧೂಪದಾಗೊಗ್ಗವ್ವೆಯೆಂಬಾಕೆ
ಶಿವಗೆ ಧೂಪದ ನೀಡಿ ಕೈಲಾಸ ಪದವನುಂ"
ಶಿವಭಕ್ತರಿಗೆ ತೋರಿ ಶಂಕರನ ಕೃಪೆ ಪಡೆದಳ

ಗೊಗ್ಗವ್ವೆ ವಿಷ್ಠೆಯಿಂದ ತನ್ನ ಧೂಪದ ಕಾಯಕವನ್ನು ಮಾಡುವುದರೊಂದಿಗೆ ಚೇರಮರಾಯನಂತವರಿಗೂ ಮಾರ್ಗದರ್ಶಕಳಾಗಿದ್ದಾಳೆಂದರೆ ಅವಳ ಆಧ್ಯಾತ್ಮಿಕ ಸಾಧನೆಯ ಅರಿವಾಗುತ್ತದೆ. ಆ ಸಾಧನೆಯ ಫಲವು ವ್ಯಕ್ತಿಗತವಾಗಿರದೆ ಶಿವಭಕ್ತರಿಗೆ ಸತ್ವದರಿವು ಉದ್ದೀಪನಗೊಳಿಸಲು, ನೆರವು ನೀಡುತ್ತಿತ್ತು. ಬಸವಾದಿಗಳ ಸಮಕಾಲೀನ ಶರಣೆಯಾಗಿದ್ದುದರಿಂದ ಈಕೆಯ ಕಾಲವನ್ನು ೧೧೬೦ ಎಂದು ನಿರ್ಧರಿಸಲಾಗಿದೆ. ಔರಾದ ತಾಲೂಕಿನ ಸಂತಪೂರ ಸಮೀಪದ ಧೂಪದ ಮಹಾಗಾಂವದಲ್ಲಿ ಈಕೆ ತನ್ನ ಜೀವನದ ಕೊನೆಯ ದಿನಗಳನ್ನು ಕಳೆದಿರಬೇಕು. ಅಲ್ಲಿ ಈಕೆಯ ಪ್ರಾಚೀನ ದೇವಾಲಯವಿದ್ದು ನಮ್ಮವರಿಂದ ಜೀರ್ಣೋದ್ಧಾರ ಬಯಸುತ್ತಿದೆ.

'ನಾಸ್ತಿನಾಥಾ' ಮುದ್ರಿಕೆಯ ಈಕೆಯ ೬ ವಚನಗಳು ದೊರೆತಿವೆ.

"ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾಗುವುದೆಂದರಿಯಬೇಕು"

ಹೆಣ್ಣನ್ನು ಒಂದು ಒಡವೆಯನ್ನಾಗಿಸಿದ ಸ್ಥಾಪಿತ ಮೌಲ್ಯವನ್ನು ಧಿಕ್ಕರಿಸಿದ, ಸ್ತ್ರೀ–ಪುರುಷರ ಸಮಾನತೆಯ ಕಹಳೆಯಿನ್ನೂದಿದ ಜ್ಞಾನಕ್ಕೆ ಹೆಣ್ಣು–ಗಂಡೆಂಬ ಭೇದಭಾವವಿಲ್ಲವೆಂದು ಸಾರಿದ ದಿಟ್ಟ ಶರಣೆ ಗೊಗ್ಗವ್ವೆ. ಶುದ್ಧ ಮನಸ್ಸಿನಿಂದ ಮಾಡುವ ಯಾವುದೇ ಕಾಯಕದ ಮೂಲಕ ಚಿದ್ರೂಪವನ್ನರಿಯಲು, ಅರ್ಚನೆ ಪೂಜಾದಿ ನಿಯಮಗಳಿಂದ ಶಿವನನ್ನು ಒಲಿಸಿಕೊಳ್ಳಲು ಸಾಧ್ಯವೆಂದು ಗೊಗ್ಗವ್ವೆಯ ಅಭಿಮತವಾಗಿದೆ. ಚಿದ್ರೂಪನಾದ ಶಿವನನ್ನು ಅರ್ಚನೆ, ಪೂಜ, ನಿತ್ಯ ನೇಮಗಳನ್ನು ಸತ್ಯದಿಂದ ಮಾಡಿ ಅರಿಯಬೇಕು. ಹಾಗಿಲ್ಲವೆಂದು ಅವನ ಸಾಕ್ಷಾತ್ಕಾರ ಸಾಧ್ಯವಿಲ್ಲ. ಹಾಗೆ ಅರಿತು ಬೆರೆತ ಮೇಲೆ ಅಂಗಲಿಂಗವೆಂಬ ಭೇದ ಇಲ್ಲವಾಗುತ್ತದೆ.

> "ಮಾರುತನಲ್ಲಿ ಬೆರೆದ ಗಂಧದಂತೆ
> ಸುರತದಲ್ಲಿ ಬೆರೆದ ಸುಖದಂತೆ
> ಮಚ್ಚಿದಲ್ಲಿ ಕೊಡುವ ಉಚಿತದಂತೆ
> ಭಕ್ತರಿಗದೆ ಹಾದಿ ಎಂದೆ ನಾಸ್ತಿನಾಥಾ"

ಇದು ಲಿಂಗಾಂಗ ಸಾಮರಸ್ಯದ ರೀತಿ. ಗೊಗ್ಗವ್ವೆ ಹೇಳುವ ಪ್ರತಿ ಸಾಲು ಅರ್ಥಪೂರ್ಣವಾಗಿದ್ದು ಆಕೆಯ ಅದ್ಭುತ ಪ್ರತಿಭೆಯ ಪ್ರತೀಕವಾಗಿದೆ.

# ಡೋಹರ ಕಕ್ಕಯ್ಯ

ಸುಮಾರು ಕ್ರಿ. ಶ. ೧೧೩೦ ರ ಕಾಲಾವಧಿಯ ಬಸವಣ್ಣನವರ ಹಿರಿಯ ಸಮಕಾಲೀನ ಶರಣ ಡೋಹರ ಕಕ್ಕಯ್ಯ ಮಧ್ಯಪ್ರದೇಶದ ಮಾಳವ ಪ್ರಾಂತದ ನಿವಾಸಿ. ಶಿವಭಕ್ತಿಯ ಶಿಖರವನ್ನರಸಿ ಕಲ್ಯಾಣಕ್ಕೆ ಆಗಮಿಸುವನು. ಜೋದರ ಕುಲದ ಕಕ್ಕಯ್ಯನ ವೃತ್ತಿ ಚರ್ಮಹದ ಮಾಡುವುದು. ಚರ್ಮಹದ ಮಾಡುವವರನ್ನು ಉತ್ತರ ಕರ್ನಾಟಕದಲ್ಲಿ ಡೋಹರ ಎಂದು ಸಂಬೋಧಿಸುತ್ತಾರೆ. 'ಶಿವನಿಂದೆಯನ್ನು ಕೇಳೆ' ಎಂಬುದು ಕಕ್ಕಯ್ಯನ ನಿಯಮ. ಒಮ್ಮೆ ಕಲ್ಯಾಣದ ಬೀದಿಯಲ್ಲಿ ಹರಿಯ ಮಹಿಮೆಯನ್ನು ಬಣ್ಣಿಸುತ್ತಿದ್ದ ಬ್ರಾಹ್ಮಣನನ್ನು ಇರಿದು ಕೊಲೆ ಮಾಡಿದನೆಂದು; ಮತ್ತೊಮ್ಮೆ ಕಕ್ಕಯ್ಯನ ಲಿಂಗವನ್ನು ಕಲ್ಲೆಂದು ಅವಹೇಳನ ಮಾಡಿದ ವೆಂಗಿಭೂಪನನ್ನು ಕೊಂದನೆಂದು; ಕಕ್ಕಯ್ಯನ ಮನೆಯಲ್ಲಿನ ಮಿಕ್ಕಿದ ಪ್ರಸಾದವನ್ನು ಇರುವೆಗಳ ಮೂಲಕ ತರಿಸಿಕೊಂಡು ಬಸವಣ್ಣ ಸೇವಿಸುತ್ತಿದ್ದನೆಂದು ಪುರಾಣಗಳು ಬಣ್ಣಿಸುತ್ತವೆ. ಇವು ಉತ್ಪ್ರೇಕ್ಷೆಯ ಘಟನೆಗಳಾದರೂ ಕಕ್ಕಯ್ಯನ ಶಿವನಿಷ್ಠೆಯ ಪ್ರತೀಕವಾಗಿದೆ. ಕಲ್ಯಾಣಕ್ರಾಂತಿಯ ಸಂದರ್ಭದಲ್ಲಿ ಶಿವಶರಣರ ಪರವಾಗಿ ಹೋರಾಡಿದ ಸಂಗತಿಗಳು ವೀರಶೈವ ಪುರಾಣಗಳಿಂದಲೇ ತಿಳಿದುಬರುತ್ತದೆ. ವೀರಾವೇಶದಿಂದ ಹೋರಾಡುತ್ತಲೇ ಬೆಳಗಾಂವ ಜಿಲ್ಲೆಯ ಕಿಕ್ಕೇರಿಯಲ್ಲಿ ಬಯಲಾದನು. ಕಿಕ್ಕೇರಿಯಲ್ಲಿಯೇ ಈತನ ಸ್ಮರಣಾರ್ಥವಾದ ದೇವಾಲಯ ಕೆರೆ, ಬಾವಿಗಳಿವೆ.

ಡೋಹರ ಕಕ್ಕಯ್ಯನ ಸೂತಕದ ಕಲ ಉದ್ಧಾರಗೊಂಡಿದ್ದು ಬಸವಣ್ಣಿಂದ ಎಂಬ ಅಂಶವು–

ಎನ್ನ ಕಷ್ಟ ಕುಲದಲ್ಲಿ ಹುಟ್ಟಿದನೆಂಬ ಕರ್ಮವ ಕಳೆದು
ಮುಟ್ಟಿ ಪಾವನವ ಮಾಡಿ
ಕೊಟ್ಟನಯ್ಯಾ ಎನ್ನ ಕರಸ್ಥಲಕ್ಕೆ ಲಿಂಗವ !.........

ಎಂಬುದರಿಂದ ಸ್ಪಷ್ಟವಾಗುತ್ತದೆ. ಬಸವಣ್ಣನಿಗೆ ಪ್ರಸಾದದ ಮಹಿಮೆ, ಪವಿತ್ರತೆಯ, ಅರಿವು ಕಕ್ಕಯ್ಯನಿಂದಾದಾಗ ಅಪ್ಪಯ್ಯ ಡೋಹರ ಕಕ್ಕಯ್ಯ, ಕಿರಿಯಯ್ಯ ಡೋಹರ ಕಕ್ಕಯ್ಯ ಎಂದು ಬಸವಣ್ಣನವರು ಹೊಗಳುತ್ತಾರೆ. ಹೀಗಾಗಿ ಬಸವಣ್ಣ–ಕಕ್ಕಯ್ಯರ ನಡುವೆ ಅವಿನಾ ಭಾವ ಸಂಬಂಧವಿರುವುದು ವೇದ್ಯವಾಗುತ್ತದೆ.

'ಅಭಿನವ ಮಲ್ಲಿಕಾರ್ಜುನ' ಅಂಕಿತದ ಈತನ ೬ ವಚನಗಳು ಲಭ್ಯವಾಗಿವೆ. ಅವುಗಳಲ್ಲಿ ದಲಿತರ ಧನ್ಯತೆಯ ಭಾವ, ಪ್ರಸನ್ನತೆಯ ಅರಿವು ಸಮಕಾಲೀನರ ಸ್ತುತಿಯ ಅಂಶಗಳು ವ್ಯಕ್ತವಾಗಿವೆ.

ಎನ್ನ ಕಷ್ಟ ಕುಲದಲ್ಲಿ ಹುಟ್ಟಿದನೆಂಬ ಕರ್ಮವ ಕಳೆದು
ಮುಟ್ಟಿ ಪಾವನವ ಮಾಡಿ
ಕೊಟ್ಟನಯ್ಯಾ ಎನ್ನ ಕರಸ್ಥಲಕ್ಕೆ ಲಿಂಗವ !
ಆ ಲಿಂಗ ಬಂದು ಸೋಂಕಲೊಡನೆ
ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯಾ !

ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ !
ಎನ್ನ ಅರುಹಿನಲ್ಲಿ ಪ್ರಸಾದವ ನೆಲಗೊಳಿಸಿದ !
ಇಂತೀ ತ್ರಿವಿಧ ಸ್ಥಾನವ ಶುದ್ಧವ ಮಾಡಿ
ಚತುರ್ವಿಧ ಸಾರಾಯಸ್ಥಲವ ಸಂಬಂಧವ ಮಾಡಿದ
ಸಂಗನ ಬಸವಣ್ಣನ ಕರುಣದಿಂದ
ಪ್ರಭುದೇವರ ಶ್ರೀಪಾದವ ಕಂಡು ಬದುಕಿದೆನು ಕಾಣಾ !
ಅಭಿನವ ಮಲ್ಲಿಕಾರ್ಜುನಾ

ದಲಿತವ ಮನದಲ್ಲಿ ಮನೆ ಮಾಡಿದ್ದ ಅಸ್ಪೃಶ್ಯತೆಯ ಸೋಂಕನ್ನು ನಿರ್ನಾಮ ಮಾಡಿದ ಬಸವಾದಿಗಳನ್ನು ಬಹುವಿಧವಾಗಿ ಸ್ತುತಿಸಿದ್ದಾನೆ. ಏಳ್ನೂರೆಪ್ಪತ್ತು ಅಮರಗಣಂಗಳ ಶ್ರೀಪಾದಕ್ಕೆ ಶರಣೆಂದು ಬದುಕಿದನೆಂದು ಹೃದಯ ತುಂಬಿ ಹೇಳಿಕೊಂಡಿದ್ದಾನೆ.

## ಬೊಂತಾದೇವಿ

ಪ್ರಾದೇಶಿಕ ಅಂತರವನ್ನು ಮೀರಿ ಸ್ತ್ರೀ ಸಬಲೀಕರಣಕ್ಕೆ ಹೊಸ ವ್ಯಾಖ್ಯಾನ ನೀಡಿದ ಶಿವಶರಣೆ ಬೊಂತಾದೇವಿ. ಈಕೆಯ ಮೂಲ ಹೆಸರು ನಿಜದೇವಿ. ಕಾಶ್ಮೀರದ ಮಾಂಡವ್ಯಪುರದ ರಾಜನ ಮಗಳು. ಮೋಳಿಗೆ ಮಾರಯ್ಯನ ನಿಜತಂಗಿ. ಬಾಲ್ಯದಲ್ಲಿಯೇ ವೈರಾಗ್ಯ ಮೂಡಿತು. ಬಸವಣ್ಣನ ವ್ಯಕ್ತಿತ್ವದಿಂದ ಆಕರ್ಷಿತಳಾಗಿ ರಾಜಭೋಗವನ್ನು ತೊರೆದು ದಿಗಂಬರೆಯಾಗಿ ಕಲ್ಯಾಣಾಭಿಮುಖವಾಗಿ ಹೊರಟಳು. ಹೆಣ್ಣು ಒಂಟಿಯಾಗಿ ಮನೆಯನ್ನು ತ್ಯಾಗ ಮಾಡಿದ ಮೇಲೆ ಅವಳೆದುರಿಗೆ ಬರುವ ತಾಪತ್ರಯಗಳು ಹಲವಾರು. ಪರಮ ಸುಂದರೆ, ದಿಗಂಬರೆಯಾಗಿದ್ದರಂತೂ ಮುಗಿಯಿತು! ಅವಳನ್ನು ಸುಂದರಿ ದೇವರೇ ಕಾಪಾಡಬೇಕು. ಕಾಶ್ಮೀರದಿಂದ ಕಲ್ಯಾಣದವರೆಗಿನ ಮಾರ್ಗದಲ್ಲಿ ನಿಜದೇವಿಯನ್ನು ಎಷ್ಟೊ ಜನರು ಕಾಡಿರಬೇಕು. ಅನೇಕರು ಮೋಹಿಸಿ ವರಿಸಲು ಮುಮದೆ ಬಂದಿರಬೇಕು. ಆದರೆ ಅವರೆಲ್ಲರನ್ನು ಧಿಕ್ಕರಿಸಿ ನಿಂತವಳು ನಿಜದೇವಿ. ಈಕೆಯನ್ನು ಪರೀಕ್ಷಿಸಲು ಶಿವ, ಸುಂದರ ಯುವಕನಾಗಿ, ವ್ಯಾಪಾರಿಯಾಗಿ ಬಂದು, ತನ್ನನ್ನು ಮದುವೆಯಾಗಲು ಎಷ್ಟೊ ಸಲ ಬೇಡಿಕೊಂಡರೂ ಒಪ್ಪಲಿಲ್ಲ. ಶಿವನ ವೇಷವನ್ನು ಗುರುತಿಸಿ ಅಪಹಾಸ್ಯ ಮಾಡಿದಳು. ನಿಜದೇವಿಯ ವೀರವೈರಾಗ್ಯವನ್ನು ಮೆಚ್ಚಿಕೊಂಡ ಶಿವನು ಆಕೆಗೆ ಹೊದ್ದುಕೊಳ್ಳಲು ಒಮದು ಬೊಂತೆ (ಖೌದಿ)ಯನ್ನ ಕೊಟ್ಟನು. ಪುರಾಣಕಾರರು ಬಸವಣ್ಣನೇ ಬೊಂತೆ ಕೊಟ್ಟನೆಂದು ಹೇಳುವುದುಂಟು, ಅದನ್ನವಳು ಧರಿಸಿದ್ದರಿಂದ ಆಕೆಗೆ 'ಬೊಂತಾದೇವಿ" ಎಂಬ ಹೆಸರು ಬಂದಿತು.

ಅಕ್ಕಮಹಾದೇವಿಯಷ್ಟು ಪ್ರಚಾರ ಸಿಗದ, ಚರಿತ್ರೆಯ ಪುಟದಲ್ಲಿ ದಾಖಲಾಗದ ಮುಖ ಬೊಂತಾಧೇವಿಯದು. ಆದರೆ ಅಲ್ಲಮ ಪ್ರಭುಗಳು ಅಕ್ಕಮಹಾದೇವಿಗಿಂತಲೂ ಈಕೆ ಹಿರಿಯಳೆಂದು ಗೌರವಿಸಿದರು. ಕ್ರಾಂತಿಯ ತರುವಾಯವೂ ಈಕೆ ಕಲ್ಯಾಣದಲ್ಲಿಯೇ ವಾಸಿಸಿದ್ದಳೆಂದು, ತನ್ನ ಬೊಂತೆಯನ್ನೊಮ್ಮೆ ಆಕಾಶಕ್ಕೊಗೆದು ಅದರೊಡನೆ ತಾನು ಲಿಂಗದಲ್ಲಿ ಬಯಲಾದಳೆಂದು ಪುರಣಗಳಿಂದ ತಿಳಿದುಬರುತ್ತದೆ. ಈಕೆಯ ಕಾಲವನ್ನು ಕ್ರಿ. ಶ. ೧೧೬೦ ಎಂದು ಗುರುತಿಸಲಾಗಿದೆ.

'ಬಿಡಾಡಿ' ಅಂಕಿತವನ್ನಿಟ್ಟುಕೊಂಡು ವಚನ ರಚನೆಗೈದ ಈಕೆಯ ಐದು ವಚನಗಳು ಲಭಿಸಿವೆ. ಸೋಮನಾಥ ಪುರಣಾ, ಚೆನ್ನಬಸವಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಮೊದಲಾದ ಕಾವ್ಯಗಳಲ್ಲಿ ಬರುವ ವೀರವೈರಾಗ್ಯ, ಗುಪ್ತಭಕ್ತಿಯೊಂದಿಗೆ ಇಷ್ಟಲಿಂಗದಲ್ಲಿ ಬಯಲಾಗುವ ಕಥಾನಕವು ವಚನದಲ್ಲೂ ಇದೆ. ಘಟದೊಳಗಣ ಬಯಲು, ಮಠದೊಳಗಣ ಬಯಲು ತಾನೆಲ್ಲಾ ಬಯಲು ಬಿಡಾಡಿ ಬಯಲು ಎಂದಿದ್ದಾಳೆ.

> ಘಟಪಟ ನಾದಾ, ಓ ಎಂಬಾತ ಲಿಂಗ
> ತರಗೆಲೆಗಳಿಗೊಂದೆ ಗಾಳಿ, ಹಾರುತಿಪ್ಪವು
> ಒಂದೆ ಅನಿಲ, ನಿಂದ ದೇಹಪಟ್ಟೆಗಳೊಳಗೆಲ್ಲ
> ಕರೆದಡೆ ಓ ಎಂಬಾತನೆ ಬಿಡಾಡಿ

ಆಗಮ್ಮ ಅಗೋಚರ ಶಕ್ತಿಯಾಗಿರುವ ಲಿಂಗ ಭಕ್ತಿ, ಶ್ರದ್ಧೆಗಳಿಂದ ಕರೆದರೆ ಓ ಎನ್ನುತ್ತಾನೆಂಬ ವಿಶ್ವಾಸ ಬೊಂತಾದೇವಿಯದು.

## ಮರುಳ ಶಂಕರದೇವ

ಬರ್ಬರ ಅಥವಾ ಗಾಂಧಾರ ದೇಶ ಎಂದು ಕರೆಯಲಾಗುತ್ತಿದ್ದ ಈಗಿನ ಅಫ್ಘಾನಿಸ್ತಾನ ದಿಂದ ಕಲ್ಯಾಣಕ್ಕೆ ಆಗಮಿಸಿದವನು ಮರುಳ ಶಂಕರದೇವ. ಆ ಪ್ರಾಂತದ ಕಣ್ಬುತ್ತೂರು ಗ್ರಾಮದಲ್ಲಿದ್ದ 'ನೈಸರ' ನೆಂಬ ವಿರಕ್ತನ ಶಿಷ್ಯ. ಗುರುವಿನ ಆಶ್ರಮದಲ್ಲಿದ್ದು ಪ್ರಸಾದದ ಮಹಿಮೆಯನ್ನು ಅರ್ಥ ಮಾಡಿಕೊಂಡಿರುವಾಗಲೇ ಬಸವಣ್ಣನ ಮಹಿಮೆಯಯ ಸೂಜಿಗಲ್ಲು ಮರುಳಶಂಕರದೇವನನ್ನು ಕಲ್ಯಾಣಕ್ಕೆ ಆಗಮಿಸುವಂತೆ ಮಾಡಿತು. ಪ್ರಸಾದದ ಕುಂಡದಲ್ಲಿ ಹನ್ನೆರಡು ವರ್ಷ ಪ್ರಸಾದಿಕ ನಿಯಮ ಪಾಲಿಸುತ್ತ ಭಕ್ತಿಯಲ್ಲಿ ಕಾಲ ಕಳೆಯುತ್ತಿದ್ದ ಈತನನ್ನು ಪ್ರಭುದೇವರು ಗುರುತಿಸಿ ಈತನ ಹಿರಿಮೆಯನ್ನು ಕೊಂಡಾಡಿದರು.

ಒಡೆಯರೊಕ್ಕದ ತಾ ಸವಿದು,
ತನ್ನೊಕ್ಕುದ ಮಿಕ್ಕುವ ತನ್ನ ಗೃಹಚರರುಂಡು
ಮಿಕ್ಕ ಶೇಷ ಪ್ರಸಾದವು ಎನ್ನ ಲಿಂಗಕಾಯಿತ್ತು
ಆ ಪ್ರಸಾದ ಗುಂಡವ ಗೃಹವಾಗಯಿತ್ತು

ಹೀಗೆ ಗುಪ್ತ ಭಕ್ತಿಯಿಂದ ಪ್ರಸಾದ ಗುಂಡವನ್ನೇ ಗೃಹವನ್ನಾಗಿ ಮಾಡಿದ್ದ ಮರುಳ ಶಂಕರ ದೇವನು ಪ್ರಭುದೇವನ ದರ್ಶನದಿಂದ ತನ್ನ ಸಂಸಾರ ಬಂಧನ ಹರಿಯಿತೆಂದು ಹೇಳಿ ತನ್ನ ಇಷ್ಟಲಿಂಗದಲ್ಲಿ ಲೀನವಾದುದು ಪುರಾಣಗಳಿಂದ ಗೊತ್ತಾಗುತ್ತದೆ. ಇದಕ್ಕೆ ಆತನ ವಚನಗಳೂ ಆಂತರಿಕ ಪ್ರಮಾಣಗಳಾಗಿವೆ.

ಸಾಮಾನ್ಯವಾಗಿ ಎಲ್ಲ ವಚನಗಳಲ್ಲಿ ಶರಣಸತಿ–ಲಿಂಗಪತಿ ಭಾವ ಕಂಡು ಬರುತ್ತದೆ. ಆದರೆ ಶಂಕರದೇವನ ವಚನದಲ್ಲಿ ಉಕ್ತವಾಗಿರುವುದು ಶರಣಪತಿ–ಲಿಂಗಸತಿ ಭಾವ, ಈ ಜೀವನಪತಿ ದೇವಸತಿಯ ಭಾವ ಕಂಡು ಬರುವುದು ಸೂಫಿ ಸಂಪ್ರದಾಯದಲ್ಲಿ ಮಾತ್ರ. ಇವತ್ತಿಗೂ ಅಫ್ಘಾನಿಸ್ತಾನ ಮತ್ತು ಅದರ ಸುತ್ತಮುತ್ತಲಿನ ಪ್ರಾಂತದಲ್ಲಿ ಸೂಫಿ ಧರ್ಮ ಪ್ರಚಾರದಲ್ಲಿದೆ. ಉರ್ದು ಕಾವ್ಯ ಪ್ರಪಂಚದಲ್ಲೂ ದೇವರಿಗೆ ಪ್ರೇಯಸಿ ಎಂದೇ ಸಂಬೋಧಿಸಿಲಾಗುತ್ತಿದೆ. ಈ ಅಂಶವೇ ಮರುಳ ಶಂಕರದೇವ ಅಫ್ಘಾನಿಸ್ತಾನದವನೆನ್ನಲು ಬಲವಾದ ಆಧಾರವಾಗಿದೆ.

ಮಾಹಶ್ರೀ ಗುರುವೆ ತಂದೆ, ಮಹಾಜಂಗಮವೆ ತಾಯಿ
ಇವರಿಬ್ಬರ ಸಂಗ ಸಂಯೋಗದಿಂದ ನಾನು ಹುಟ್ಟಿದೆ ನೋಡಿರಯ್ಯಾ
ಸರ್ವಾಂಗ ಸಾಹಿತ್ಯ ನಾನು ಹುಟ್ಟಿದ ಬಳಿಕ
ತಂದೆ ತಾಯಿಗಳಿಬ್ಬರು ಲಿಂಗವೆಂಬ ಹೆಣ್ಣ ತಂದು.
ಎನ್ನ ಕೊರಳಲ್ಲಿ ಕಟ್ಟಿ ಮದುವೆಯ ಮಾಡಿದರಯ್ಯಾ
ಆ ಹೆಣ್ಣಿನ ಕೈವಿಡಿದು ನಾನು ಬದುಕಿದೆನು
ಆ ಹೆಣ್ಣಿನ ಸಂಯೋಗದಿಂದ ಮಗನೆಂಬ ಮಹಾಲಿಂಗ ಹುಟ್ಟಿದಯ್ಯಾ
ಆ ಮಗ ಹುಟ್ಟಿದ ಮುನ್ನವೆ ಎನಗೆ ಮರಣವಾಯ್ತು

ಲಿಂಗವೆಂಬ ಹೆಂಡತಿ ಮುಂಡೆಯಾದಳು
ತಂದೆ ತಾಯಿಗಳಿಬ್ಬರೂ ನನ್ನ ಒಂದಾಗಿ ಅಡಗಿ ಹೋದರು
ಇನ್ನು ಮುನ್ನಿನ ಪರಿ ಎಂತುಟಲ್ಲವಾಗಿ ನಾನು ಬದುಕಿದೆ ಕಾಣಾ
ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೆ ಶಾಂತ ಚೆನ್ನಮಲ್ಲಿಕಾರ್ಜುನ ದೇವಯ್ಯಾ
ನಿಮ್ಮ ಶರಣರ ಕರುಣದಿಂದ ಎನ್ನ ಕರ್ಮ ನಿರ್ಮಳವಾಯಿತ್ತಯ್ಯಾ
ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ

ಹನ್ನೆರಡು ವರ್ಷಗಳ ಕಾಲ ಬಸವಾದಿ ಅಸಂಖ್ಯಾತ ಮಹಾಪ್ರಮಥ ಗಣಂಗಳ ಪರಮ ಪ್ರಸಾದವ ಕೊಂಡು ಬದುಕಿರುವ, ಅವರೆಲ್ಲರ ಸಹವಾಸದಲ್ಲಿದ್ದು ಕನ್ನಡ ಕಲಿತು ಅನುಭವ ಪೂರ್ಣ ವಚನ ರಚನೆ ಗೈದಿರುವುದು ಅಪೂರ್ವ ಸಂಗತಿ, ಸಿದ್ಧರಾಮ ತನ್ನ ವಚನವೊಂದರಲ್ಲಿ "........ ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ ........" ವೆಂದ ಉಲ್ಲೇಖಿಸಿದರೂ ಈತನ ಕೇವಲ ೩೫ ವಚನಗಳು ದೊರೆತಿವೆ. ಸದ್ಭಕ್ತನ ಲಕ್ಷಣ, ಲಿಂಗವಂತನ ನಿಲುವು, ಶೀಲ ವಿಚಾರ, ಹಿರಿಯರ ಸ್ತುತಿ, ಅನುಭಾವ ಈ ಎಲ್ಲರ ದೃಷ್ಟಿಗಳಿಂದ ಈತನ ವಚನಗಳು ಕನ್ನಡ ಸಾಹಿತ್ಯದಲ್ಲಿ ಉನ್ನತ ಸ್ಥಾನಗಳಿಸಿವೆ.

ಗುರುಲಿಂಗ ಜಂಗಮಕ್ಕೆ ದಾಹೋಹವ ಮಾಡುವ
ಭಕ್ತನ ಪರಿಯಾವ ನೋಡಿರಯ್ಯಾ
ಶ್ರೀಗುರು ಶಿಷ್ಯಂಗೆ ಅನುಗ್ರಹವ ಮಾಡಲೊಡನೆ
ಆ ಶಿಷ್ಯ ಆ ಗುರುವ ಕೊಂದು ತಿಂದ ನೋಡಿರಯ್ಯಾ
ಲಿಂಗ ಬಂದು ಪೂಜೆಯ ಮಾಡಿಸಿಕೊಂಡು ಹೋದೆಹೆನೆಂದು ಹೋದಡೆ
ಆ ಭಕ್ತ ಆ ಲಿಂಗವ ನುಂಗಿದ ಪರಿಯ ನೋಡಿರಯ್ಯಾ
ಜಂಗಮ ಬಂದು ಲಿಂಗಾರ್ಚನೆಯ ಮಾಡಹೆನೆಂದು ಮನೆಗೆ ಬಂದಡೆ
ಆ ಭಕ್ತ ಆ ಜಂಗಮನ ಕೊಮದು ತಿಂದ ಪರಿಯ ನೋಡಿರಯ್ಯಾ
ಇಂತೀ ಮೂವರನು ಕೊಂದು ತಿಂಬವನ ಭಕ್ತನೆಂದೆಂಬನೆ ಅಯ್ಯಾ?
ಅಲ್ಲ ಅಲ್ಲ ಆತ ಅನಾಚಾರಿ, ವ್ರತಗೇಡಿ, ದುರಾಚಾರಿ,
ಇಂತೀ ದುರಾಚಾರವ ನುಡಿಯಲಾಗದು
ಆತ ದೇವಲೋಕಕ್ಕೆ ಸಲ್ಲ ಮೃತ್ಯುಲೋಕಕ್ಕೆ ಸಲ್ಲ
ಆವ ಲೋಕಕ್ಕೆಯೂ ಸಲ್ಲ
ಇಂತಪ್ಪ ಪಂಚಮಹಾ ಪಾತಕನ ಭಕ್ತನೆಂದೆನೆಗೆ ತೋರಂದಿರಾ

ಹೀಗೆ ಸುದೀರ್ಘವಾಗಿರುವ ಈತನ ಬಹಳಷ್ಟು ವಚನಗಳಲ್ಲಿ ವೀರಶೈವ ಪರಿಭಾಷೆಯ ವಿಶ್ಲೇಷಣೆ ಕಂಡು ಬರುತ್ತದೆ. ಸಂಸಾರವೆಂ ಸಾಗರ ದಾಟಲು ಅರಿವೆಂಬ ಹರುಗೋಲಬೇಕು. ಜ್ಞಾನರೆಂಬ ಅಂಬಿನಗನಿಂದ ಅದು ಸಾಧ್ಯವಾಗುತ್ತದೆ. ಎನ್ನುತ್ತಾನೆ.

## ಮಾದಾರ ಚೆನ್ನಯ್ಯ

ತಮಿಳುನಾಡಿನ ಕಾಂಚಿ ಪಟ್ಟಣದರಸ ಕರಿಕಾಲ ಚೋಳನ ಕುದುರೆಗಳನ್ನು ಮೇಯಿಸುವ, ಆಶ್ವಾಲಯಕ್ಕೆ ಹುಲ್ಲು ಪೂರೈಸುವ ಕಾರ್ಯ ಮಾದಾರ ಚೆನ್ನಯ್ಯನದು. ಶಿವಾನಭವಿಯಾಗಿದ್ದ ಈತನ ಗುಪ್ತಭಕ್ತಿಯನ್ನು ಸಮಾಜಕ್ಕೆ ಪರಿಚಯಿಸಬೇಕೆಂದು ಶಿವ ಅಂಬಲಿಯ ಪವಾಡ ಮೆರೆದನು. ಇದರಿಂದ 'ಶಿವಭಕ್ತ ಶಿರೋಮಣಿ' ಎಂದು ಹೆಸರುಗೊಂಡಿದ್ದ ಚೋಲ ದೊರೆಯ ಗರ್ವರಸ ಸೋರಿತು. ಮಾದಾರಕೇರಿಗೆ ಕರಿಕಾಲ ಚೋಲ ಭೇಟಿ ನೀಡಿ ಚೆನ್ನಯ್ಯನ ಕಾಲಿಗೆರಗಿ ಸನ್ಮಾನಿಸಿದನು. ಮಾದಾರ ಚೆನ್ನಯ್ಯನ ಅಂಬಲಿಯ ಮುಮದೆ ಚೋಳ ದೊರೆಯ ಮೃಷ್ಟಾನ್ನ ಭೋಜನ ನಿಸ್ಸಾರವಾಗಿದ್ದು, ದೊರೆಯ ಡಂಭಾಚಾರದ ಭಕ್ತಿಯ ಮುಂದೆ ಚೆನ್ನಯ್ಯಯನ ಭಕ್ತಿ ಬೆಟ್ಟದೆತ್ತರವಾಗಿದ್ದು, ಅರಮನೆಯಿಂದ ಹೊಲೆ ಮಾದಿಗರ ಕೇರಿಗೆ ದೊರೆ ಧಾವಿಸಿ ಬರುವುದು ಸಾಮಾಜಿಕ ಸ್ಥಿತಿಗತಿಯ ಪಲ್ಲಟಗಳಿಗೆ ಸಂಕೇತಗಳಾಗಿವೆ.

ಶ್ರೇಷ್ಠತೆಯ ಪ್ರತಿನಿಧಿಯಾಗಿರುವ ಅರಸ ಭಕ್ತಿಭಾವದಿಂದ ಚೆನ್ನಯ್ಯನ ಕಾಲಿಗೆರಗಿರುವುದು ಸಾಮಾಜಿಕರಿಗೆ ಸೋಜಿಗವನ್ನುಂಟು ಮಾಡಿದೆ. ಆಕಸ್ಮಿಕವಾಗಿ ನಡೆದ ಘಟನೆಯಿಂದ ಚೆನ್ನಯ್ಯನಿಗೂ ಮುಜುಗರವನ್ನುಂಟು ಮಾಡಿದೆ. ಚೆನ್ನಯ್ಯನ ಪಾದಗಳ ಮೇಲೆ ಮಸ್ತಕವನ್ನಿಟ್ಟು ಹಲುವು ಪರಿಯಾಗಿ ಹಲಬುವ, ಪಶ್ಚಾತ್ತಾಪಪಟ್ಟು ಒರಲಾಡಡುವ ಚೋಳನನ್ನು ಕುರಿತು ಚೆನ್ನಯ್ಯ –

> "ಏನಯ್ಯ 'ಚೋಳನ್ನಪ ನೀನಿಂತು ಬಪ್ಪರೇ
> ಭಾನುಕುಲ ದರ್ಪಣನೆ ನೀನಿಂತು ಮಾಳ್ಪರೇ
> ಎನ್ನ ಕುಲಕಮಂ ನೋಡದಿಂತು ಬರ್ಪರೆ ಚೋಳ
> ಎನ್ನ ಜಾತಿಯನರಿಯದಿಂತು ಮಾಳ್ಪರೆ ಚೋಳ" ಹೇಳುತ್ತಾನೆ.

ಭಾನುಕುಲದರಸನಿಗೆ ನೀಚ ಕುಲದವನ ಚೈತನ್ಯ ಗೋಚರಿಸುತ್ತಿರುವುದು; ಶೈವಧರ್ಮವು ಶರಣ ಧರ್ಮದಲ್ಲಿ ಪರ್ಯಾಯವಸಾನಗೊಳ್ಳುವುದು; ಅದುವರೆಗೂ ಕೀಳೆನಿಸಿದವರೂ ಉಚ್ಚ ಕುಲದವರ ಗೌರವಕ್ಕೆ ಭಾಜನರಾಗುತ್ತಿರುವುದು ; ಪ್ರತಿಯೊಂದು ಜೀವಿಯ ಅಭಿವ್ಯಕ್ತಿಗೆ ಅರಸನಿಂದಲೇ ಮನ್ನಣೆ ಸಿಗುತ್ತಿರುವುದು ಹರಿಹರನ ರಗಳೆಯ ಸಾಲುಗಳಿಂದ ಸ್ಪಷ್ಟವಾಗುತ್ತದೆ. ತನ್ನ ಭಕ್ತಿ ಪ್ರಕಟಗೊಂಡಿತೆಂದು ಚೆನ್ನಯ್ಯಾ ಪ್ರಾಣ ತ್ಯಾಗಕ್ಕೆ ಸಿದ್ಧನಾದಾಗ ಶಿವನೇ ಪ್ರತ್ಯಕ್ಷನಾಗಿ ಸಮಾಧಾನ ಪಡಿಸಿ ಕಲ್ಯಾಣಕ್ಕೆ ಹೋಗಲು ಸೂಚಿಸಿದನೇಂದು, ಕಲ್ಯಾಣದಲ್ಲಿ ಪಾದರಕ್ಷೆ ಹೊಲಿಯುವ ತನ್ನ ಕಲವೃತ್ತಿಯನ್ನು ಕಾಯಕವನ್ನಾಗಿಸಿದ ಈತ ದಲಿತ ಶಿವಶರಣ, ಶಿವನೊಲುಮೆ ಪಡೆಯಲು ವೃತ್ತಿ–ಜಾತಿ–ಅಂತಸ್ತು ಮುಖ್ಯವಲ್ಲ. ಶಿವಭಕ್ತಿ ಮುಖ್ಯವೆಂಬ ಮಹತ್ವದ ವಿಚಾರಗಳು ಚೆನ್ನಯ್ಯಯ ಚರಿತ್ರೆಯಿಂದ ತಿಳಿದುಬರುತ್ತದೆ.

ಚೆನ್ನಯ್ಯಯನ 'ಕಯ್ಯುಳಿ ಕತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅರಿ ನಿಜಾತ್ಮರಾಮ ರಾಮನಾ'

ಅಂಕಿತದ ೧೦ ವಚನಗಳು ಸಿಕ್ಕಿವೆ. ಸಮಗಾರ ವೃತ್ತಿಯ ಪರಿಕರಗಳಿಗೆ ಕೊಟ್ಟಿರುವ ಗೌರವ ಚೆನ್ನಯ್ಯನ ಅಂಕಿತದಿಂದಲೇ ಗೊತ್ತಾಗುತ್ತದೆ. ತೊಗಲಿನ ಗುಣಧರ್ಮವನ್ನು ಚೆನ್ನಾಗಿ ಬಲ್ಲ ಚೆನ್ನಯ್ಯ ಎಮ್ಮೆಯ ಚರ್ಮವನ್ನು ಸುಲಿದು ಹದಗೊಳಿಸುವ ಕೆಲಸ ಶ್ರಮದಾಯಕವಾದುದು. ನೀರಿನಲ್ಲಿ ನೆನೆ ಹಾಕಿ, ಖಾರದ ನೀರನ್ನು ಹೊಯಿದು ಅಟ್ಟೆಯ ದುರ್ಗುಣ ಕಳೆದಾಗ ಮಾತ್ರ ಬಳಸಲು ಯೋಗ್ಯವಾಗುತ್ತದೆ. ಕೋಣ, ಎಮ್ಮೆ ಉಡದ ಚರ್ಮ ದಪ್ಪವಾದರೆ ಎತ್ತು, ಆಕಳು, ಆಡಿನ ಚರ್ಮ ತೆಳುವಾಗಿರುತ್ತದೆ ಎಂದು ಹೇಳುವರು.

ಬ್ರಾಹ್ಮಣ ಜನ್ಮತಃ ಶ್ರೇಷ್ಠವೆನ್ನುವ ವರ್ಣಾಶ್ರಮ ವ್ಯವಸ್ಥೆಯನ್ನು ಅಲ್ಲಗಳೆದು ಸಪ್ತಋಷಿಗಳ ಮೂಲವನ್ನು ಎತ್ತಿ ತೋರಿಸುತ್ತಾನೆ.

ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ
ದೂರ್ವಾಸ ಮಚ್ಚಿಗ, ದಧೀಚಿ ಕೀಲಿಗ
ಕಶ್ಯಪ ಕಮ್ಮಾರ, ರೋಮಜ ಕಂಚುಗಾರ
ಕೌಂಡಿಲ್ಯ ನಾವಿದನೆಂಬುದನರಿಸು,
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ?
ಇಂತೀ ಸಪ್ತಋಷಿಯರುಗಳೆಲ್ಲರೂ
ಸತ್ಯದಿಂದ ಮುಕ್ತರಾದುದನರಿಯದೆ.
ಅಸತ್ಯದಲ್ಲಿ ನಡೆದು, ವಿಪ್ರರು ನಾವು ಘನವೆಂದು
ಹೋರುವ ಹೊತ್ತು ಹೋಕರ ಮಾತೇತಕ್ಕೆ?
ಕೈಯುಳಿ ಕತ್ತಿ ಅಡಿಗೂಂಟಕ್ಕೆಡಿಯಾಗಬೇಡ
ಅರಿ ನಿಜಾತ್ಮರಾಮ ರಾಮನಾ

ಯಾವೊಬ್ಬ ವ್ಯಕ್ತಿ ಸತ್ಯಮಾರ್ಗದಲ್ಲಿ ನಡೆದು ಪರತತ್ವ ಅರ್ಥಮಾಡಿಕೊಂಡಾತನೇ ಶ್ರೇಷ್ಠನಾಗಲು ಸಾಧ್ಯ. ನಡೆ ನುಡಿಗಳೆರಡು ಸಿದ್ಧಾಂತವಾದಲ್ಲಿ ಕುಲ ಹೊಲೆ ಎಂಬ ಸೂತಕವಿಲ್ಲ. ನುಡಿಲೇಸು ನಡೆಯಧಮವಾದಲ್ಲಿ ಅದು ಬಿಡುಗಡೆಯಿಲ್ಲದ ಹೊಲೆತನ ಎನಿಸಿಕೊಳ್ಳುತ್ತದೆ. ಹಾಗಾಗಿ ಪ್ರತಿಯೊಬ್ಬ ಮನುಷ್ಯ ಜಾತಿ ಕುಲ ಗೋತ್ರವನ್ನು ಅರಸಬಾರದು. ಹೊಲೆ ಹದಿನೆಂಟು ಜಾತಿಗಳೆಂಬ ಕುಲವಿಲ್ಲ. ಬ್ರಹ್ಮವನರಿದಲ್ಲಿ ಬ್ರಾಹ್ಮಣ.

ಸರ್ವ ಜೀವಹತ ಕರ್ಮಕ್ಕೊಳಗಾಗಿದ್ದಲ್ಲಿ ಸಮಗಾರನೆಂದು ವ್ಯಾಖ್ಯಾನಿಸುತ್ತಾನಲ್ಲದೆ, ಆಚಾರವೆ ಕುಲ ಅನಾಚರವೆ ಹೊಲೆಯ ಎಂದು ಹೊಸದಾಗಿ ಜಾತಿ ಭಾಷ್ಯವನ್ನು ಬರೆದು ಬದುಕಿದವನು ಮಾದಾರ ಚೆನ್ನಯ್ಯ. ನರಕುಲ ಹಲವಾದಲ್ಲಿ ಯೋನಿಯ ಉತ್ಪತ್ಯ ಒಂದೇ ಭೇದವೆನ್ನುವ ಜೈವಿಕ ಜ್ಞಾನವನ್ನು ಅರಹುತ್ತಾನೆ. ವೇದಶಾಸ್ತ್ರಕ್ಕೆ ಹಾರುವ, ವೀರವಿತರಣಕ್ಕೆ ಕ್ಷತ್ರಿಯ, ವ್ಯಾಪಾರಕ್ಕೆ ವೈಶ್ಯ, ಕೃಷಿಗೆ ಶೂದ್ರನೆಂದು ಅವರವರ ಕರ್ತವ್ಯಗಳನ್ನು ಸೂಚಿಸಿದ್ದಾನೆ. ಒಟ್ಟಾರೆ ಚೆನ್ನಯ್ಯ ಚಾತುರ್ವರ್ಣ ಕರ್ಮ ಸಿದ್ಧಾಂತಕ್ಕೆ ನೀಡುವ ಪ್ರತಿಕ್ರಿಯೆ; ಸಪ್ತ ಋಷಿಗಳ ಯತಾರ್ಥತೆಯನ್ನು ಪ್ರಶ್ನಿಸುವ ರೀತಿ ಗಮನಾರ್ಹವಾಗಿದೆ.

## ಮೋಳಿಗೆ ಮಾರಯ್ಯ – ಮಹಾದೇವಿಯಮ್ಮ

ಮೂಲತಃ ಕಾಶ್ಮೀರದ ಸವಾಲಕ್ಷ ನಾಡಿನ ಮಾಂಡವ್ಯಪುರದ ಅರಸ ಮಹಾದೇವ ಭೂಪಾಲ, ರಾಣಿ ಗಂಗಾದೇವಿಇ, ಶಿವಭಕ್ತರಾದ ದಂಪತಿಗಳು. ಪ್ರತಿನಿತ್ಯ ಆರು ಸಾವಿರ ಜಂಗಮರಿಗೆ ಆರೋಗಣೆ ಮಾಡುತ್ತ ಜೀವಿಸುತ್ತಿದ್ದರು. ದೈವಪೂಜೆ, ಜಂಗಮರ ಇಷ್ಟಾರ್ಥ ಪೂರೈಸುವ ನಿಯಮದಿಂದ್ದರು. ಒಮ್ಮೆ ಆ ಜಂಗಮರೆಲ್ಲ ಭಕ್ತಿ–ಕಾಯಕ–ದಾಸೋಹ ಕೇಂದ್ರಿತ ಕಲ್ಯಾಣಕ್ಕೆ ತೆರಳಿದ ಸುದ್ದಿ ತಿಳಿದ ಅರಸನಿಗೆ ವಿಚಿತ್ರವೆನಿಸಿದರೂ. ಜೋ ಚಿಕ್ಕಯ್ಯ, ನಿಜಲಿಂಗ ಚಿಕ್ಕಯ್ಯನ ವೃತ್ತಾಂತದಿಂದ ಬಸವಣ್ಣನವರ ಗುರುತ್ವಾಕರ್ಷಣ ಶಕ್ತಿಯ ಅರಿವಾಗುತ್ತದೆ. ಭಕ್ತಿಯಂಕುರ ಬೆಳೆದಂತೆಲ್ಲಾ ಅರಸೊತ್ತಿಗೆಯ ಕೋಶ–ವಾಸವನ್ನು ತೊರೆದು ಕಾವಿ ರುದ್ರಾಕ್ಷಿಧಾರಿಯಾಗಿ ನಿಂತ ಮಹಾದೇವ ಭೂಪಾಲನು ತನ್ನ ಪತ್ನಿಯ ನಿಲುವು ಪ್ರಶ್ನಿಸಿದಾಗ ಆಕೆಯ ನಿರ್ಧಾರ ಕವಿ ಗೌರವಾಂಕನು ಮೋಳಿಗೆ ಮಾರಯ್ಯ ಪುರಾಣದಲ್ಲಿ ಹೀಗೆ ಉಲ್ಲೇಖಿಸಿದ್ದಾನೆ.

ಸುಧೆಯನು ಸವಿಯಲರಿಯದೆ ಕೆಚ್ಚಲ ಕಚ್ಚಿ
ರುಧಿರವನೀಂಟುವುಣ್ಣಿಯೊಲು ।
ಸದಮಲ ಮುಕ್ತಿಯ ಸುಖಮಿರೆ ಬಿಟ್ಟು ಮಾ
ಯದ ಸಿರಿಯಲ್ಲಿ ನಾನಿಹೆನೆ?

ಹೀಗೆ ದಂಪತಿಗಳಿಬ್ಬರು ಅಚಲ ನಿಲುವು ತಳೆದು ವೈರಾಗ್ಯಭಾವದಿಂದ ಕಲ್ಯಾಣದ ಶರಣರ ಬಳಗದಲ್ಲಿ ಒಂದಾಗಿ, ಕಟ್ಟಿಗೆ ಮಾರುವ ಕಾಯಕವನ್ನು ಕೈಗೊಂಡು ಮೋಳಕೇರಿ ಗ್ರಾಮದಲ್ಲಿ ನೆಲೆಸಿದರು. ಇವತ್ತಿಗೂ ಮೋಳಕೇರಿಯಲ್ಲಿ ಮಾರಯ್ಯನ ಗವಿಯಿದೆ.

"ಸವಾಲಕ್ಷದಲ್ಲಿ ಹುಟ್ಟಿ ಸಕಲ ಕ್ರಮಗಳಿಂದ ಭೋಗಿಸಿ
ಪುಣ್ಯ ಪಾಪಂಗಳೆಂಬುದನರಿಯದೆ, ಶ್ರುತಸ್ಮೃತಿ ತತ್ವಂಗಳ ತಿಳಿಯದೆ,
ಅಗಮ್ಯ ಅಗೋಚರ ಲಿಂಗವನರಿಯದೆ
ವೃಥಾ ವೈಭವಕ್ಕೆ ಕೆಡುತ್ತಿದ್ದಿಯಲ್ಲಾ
ಅಂದು ಬಂದ ಕಥನ, ಬಸವೇಶ್ವರನಿಂದ ಬಂದ ಮಥನ.
ಶುಷ್ಪ ಕಾಯಕದ ಯತನ, ಎನ್ನ ಸತಿಭಾವದ ಜತನ,
ಭಕ್ತಿವರ್ತನದ ಸೌಖ್ಯ ಸಂಬಂಧ, ನಿಷ್ಠೆ ದೃಷ್ಟ ಭಕ್ತಿ ಜ್ಞಾನ ವೈರಾಗ್ಯ
ಇಂತಿವ ಹೊತ್ತಾಡಿದೆಯಲ್ಲಾ
ಇಂತೀ ಘಟ ಬಸವಣ್ಣನ ತಪ್ಪುಲಲ್ಲಿ ನಿಶ್ಚಯವಾಗಿ ನಿಂದಲ್ಲದೆ
ನಿಃ ಕಳಂಕ ಮಲ್ಲಿಕಾರ್ಜುನ ಲಿಂಗವ ಕಾಣಬಾರದು"
"ಬಂದೆ ನಾ ಬಸವಣ್ಣನ ಕಥನದಿಂದ ......." ಎಂಬ

ಎಂಬ ವಚನೋಕ್ತಿಗಳೇ ಮಾರಯ್ಯ, ಮಹಾದೇವಿಯರ ಬದುಕಿನ ಪೂರ್ವಾಪರ ಘಟನೆಗಳಿಗೆ ಆಧಾರವಾಗಿವೆ.

ಕಾಷ್ಠ ವಿಕ್ರಯ ದಿನದ ನಿಯಮವಾದಂತೆ ಪಡಿಯಕ್ಕಿಯ ಅಂಬಲಿ ತಯಾರಿಸಿ ಜಂಗಮಾರ್ಚನೆಯೂ ತಪ್ಪದ ನಿಯಮ. ನಾ ತಂದ ಪದಾರ್ಥವೆಲ್ಲವ ನಿಮಗಿತ್ತೆ. ನಾನಿನ್ನಂಜುವೆ ಗುರುಲಿಂಗ ಜಂಗಮದಲ್ಲಿ ಪ್ರತ್ಯುತ್ತರಕ್ಕೆ. ಎನಗೆ ಮರ್ತ್ಯದ ಮಣಿಹ, ಕೃತ್ಯವೆನ್ನೆಷ್ಟು ದಿನ ಹೇಳಾ. ಅಂದು ನೀವು ಕೊಟ್ಟ ಒಪ್ಪದ ಚೀಟನೊಪ್ಪಿಸಿದೆ ಎನ್ನುವ ಮಾರಯ್ಯನ ಮನೆಯಲ್ಲಿ ಹೊನ್ನ ಜಾಳಿಗೆಯನ್ನಿಟ್ಟು ಹೋಗುತ್ತಾರೆ. ಇದು ಮಾರಯ್ಯನಿಗೆ ತಿಳಿಯುತ್ತದೆ. ಬಸವಣ್ಣನವರ ಕ್ರಮವನ್ನು ಖಂಡಿಸಿ ಮಾರಯ್ಯ ಅಂದು ತಂದ ಕಟ್ಟಿಗೆ ಹೊರೆಗಳ ಮೇಲೆ ತೀರ್ಥ ಚಿಮುಕಿಸಿದಂತೆಲ್ಲ ಅವು ಬಂಗಾರದ ತುಣುಕುಗಳಾಗುತ್ತವೆ. ಇದರಿಂದ ಬಸವಣ್ಣನವರ ಗರ್ವರಸ ಸೋರಿ ಹೋಗುತ್ತದೆ. ಕಟ್ಟಿಗೆಯ ತುಣುಕುಗಳು ಬಂಗಾರದ ದಂಡಗಳಾಗಿ ಕಥಾನಕವು ಕೇವಲ ಪವಾಡವೆಂದು ತಳ್ಳಿ ಹಾಕುವಂತಿಲ್ಲ. ಏಕೆಂದರೆ ಮಾರಯ್ಯನ ವಚನಗಳೇ ಮೇಲ್ಕಂಡ ಘಟನೆಗೆ ಆಂತರಿಕ ಆಧಾರವಾಗಿವೆ.

ಭವಘೋರಕ್ಕಾರದೆ ಭವದಾಳಿಯ ತೊಡೆದೆನಯ್ಯಾ
ಬಡವನೆಂದು ನಿಮ್ಮವರು ನಿಧಾನವನೀವರಯ್ಯಾ
ನಾನು ಬಡವನಾದಡೆ, ನೀ ಬಡವನೇ ನಿಃ ಕಳಂಕ ಮಲ್ಲಿಕಾರ್ಜುನ?

* * *

ನಾ ಹೊತ್ತ ಕಟ್ಟಿಗೆಯ ಸರುಬ್ಬು ಮತ್ತೆ ಸುವರ್ಣ ದಂಡವಾದಾಗ
ಅದಾರ ನಿಶ್ಚಯದ ವಿಶ್ವಾಸ?
ಅವು ತಮ್ಮ ಚಿತ್ತದ ದೃಢತೆಯಿಂದ ಗುರುವಿಂಗೆ ತನಿವೆಚಿದಲ್ಲಿ
ಕಂಡಲ್ಲಿಯೆ ಆತ್ಮತೇಜವಳಿದು ಹೊಡೆಗೆಡೆಯಬೇಕು

* * *

ಮಾರಯ್ಯ ಬಸವಣ್ಣ ಹಂಗಿನ ಹೊನ್ನ ಜಾಳಿಗೆ ತಿರಸ್ಕರಿಸುವುದರ ಹಿಂದೆ ಭಕ್ತಿ ಶ್ರದ್ಧೆಯುಳ್ಳ ಭಕ್ತನಿಗೆ ನಂಬಿದ ದೇವರು ಕೈಬಿಡುವುದಿಲ್ಲ. ಅನಾಯಾಸವಾಗಿ ಸಿಕ್ಕ ಹೊನ್ನನ್ನು ತಾ ಮುಟ್ಟುವುದು ಸರಿಯಲ್ಲವೆಂಬ ಭಾವಣೆ ವ್ಯಕ್ತವಾಗಿವೆ.

ನಿಃಕಳಂಕ ಮಲ್ಲಿಕಾರ್ಜುನ ಅಂಕಿತದ ಮಾರಯ್ಯನ ೮೧೮ ವಚನಗಳು; ಎನ್ನಯ್ಯಪ್ರಿಯ ನಿಃಕಳಂಕ ಮಲ್ಲಿಕಾರ್ಜುನ ಅಂಕಿತದ ಮಹಾದೇವಿಯ ೬೯ ವಚನಗಳು ದೊರೆತಿವೆ. ಇಂದಿನ ವೈಭವಪೇತ ಜೀವನವನ್ನು ಅಪೇಕ್ಷಿಸುವ ಸಮಾಜಕ್ಕೆ ದಂಪತಿಗಳ ಸಾಮರಸ್ಯದ ಬದುಕು ದಾಂಪತ್ಯ ಆದರ್ಶಪ್ರಾಯವಾಗಿದೆ. ಕಾಯಕದಲ್ಲಿ ಕೈಲಾಸ ಕಾಣುವ ವೃತ್ತಿನಿಷ್ಠೆ. ಹಾಗೂ ಆತ್ಮಾಭಿಮಾನವನ್ನು ನಾವಿಂದು ಮೆಚ್ಚಿಕೊಳ್ಳಬೇಕು. ನಮ್ಮ ದೈನಂದಿನ ಜೀವನದಲ್ಲಿ ಆ ತತ್ವವನ್ನು ಅಳವಡಿಸಿಕೊಂಡರೆ, ನಾವಿಂದು ಎಲ್ಲಾ ಕಡೆ ಕಾಣುತ್ತಿರುವ ಮಾನಸಿಕ ಅಧಃಪತನ ವೃತ್ತಿಯ ಧ್ರುವೀಕರಣವನ್ನು ತಡೆಗಟ್ಟಲು ಸಾಧ್ಯವಾಗುತ್ತದೆ.

ವಾಸ್ತವ ಸಂಗತಿಯನ್ನು ಪ್ರಸ್ತಾಪಿಸಿ ಕ್ರಿಯೆ ಶುದ್ಧವಾದಂಗೆ ಭಾವ ಶುದ್ಧ, ಭಾವಶುದ್ಧವಾದವಂಗೆ ಆತ್ಮಶುದ್ಧ. ಆತ್ಮಶುದ್ಧವಾದವಂಗೆ ಅರಿವು ಕರಿಗೊಂಡು ಪ್ರಾಣ ಲಿಂಗ

ಸಂಬಂಧ ಏರ್ಪಡುತ್ತದೆ. ನಿಂದ ನಿಜವು ಗೋಚರಿಸುತ್ತದೆ ಎಂದು ಮಾರಯ್ಯ ತಿಳಿಸುತ್ತಾನೆ. ಕಲ್ಲು, ಮರ, ಮಣ್ಣಿನಲ್ಲಿ ದೇವನಿದ್ದಾನೆಂದು ಪೂಜಿಸುವುದು ಸರಿಯಲ್ಲ. ಅದು ವ್ಯರ್ಥ ಪರಿಶ್ರಮವಾಗುತ್ತದೆ. ಹಾಗೆ ಪೂಜಿಸುವವರು ಕಲಿಯುಗದ ಕತ್ತೆಗಳಾಗಿ ಮುಕ್ತಿ ಕಾಣದೆ ಶುನಿಸೂಕರಾದಿಗಳಾದಿ ಕೆಟ್ಟು ಹೋಗುವರೆಂದು ತಿಳಿಸುತ್ತಾನೆ.

ಭಕ್ತನಾದ ಮತ್ತೆ ಬಂಧಗಳ ಬಿಡಬೇಕು
ವಿರಕ್ತನಾದ ಮತ್ತೆ ಧರಿತ್ರಿಯಲ್ಲಿ ಸುಖಕ್ಕೆ ಸಿಕ್ಕಿ ಮತ್ತನಾಗದಿರಬೇಕು
ಇಕ್ಕುವರ ಬಾಗಿಲ ಕಾಯದೆ, ಸುಚಿತ್ತದಿಂದ ಬಂಧ ಭಿಕ್ಷವ ಕೊಂಡು
ಅನಿತ್ಯವ ಮರೆದು, ಸತ್ತು ಚಿತ್ತಾನಂದ ಭಕ್ತ ಜಂಗಮಕ್ಕೆ
ನಿತ್ಯ ನಮೋ ನಮೋ ನಿಃಕಳಂಕ ಮಲ್ಲಿಕಾರ್ಜುನಾ

ಸನ್ಯಾಸಿ ವಿರಕ್ತನೆಂದು ಹೇಳಿಕೊಳ್ಳುತ್ತ ಸಮಾಜ ಸೇವೆಯೆಂದು ಶಾಲೆ ಕಾಲೇಜು ತೆರೆದು ವಂತಿಗೆ, ಆಸ್ತಿ ಸಂಗ್ರಹಿಸುವ ಇಂದಿನ ಬಹಳಷ್ಟು ಧಾರ್ಮಿಕ ಮುಂದಾಳುಗಳು ಮಾರಯ್ಯನ ಸಂದೇಶವನ್ನು ತಮ್ಮ ಜೀವನದಲ್ಲೂ ಪಾಲಿಸಿಕೊಂಡರೆ ವೇದಿಕೆಗಳ ಮೇಲೆ ಹೇಳುವ ತತ್ವ ಸಿದ್ಧಾಂತಕ್ಕೆ ಸಾರ್ಥಕತೆ ಬರುತ್ತದೆ. ಈ ಹಿನ್ನೆಲೆಯಲ್ಲಿ ಕಾಶ್ಮೀರದರಸ ಇಂದಿನ ಸಮಾಜಕ್ಕೆ ಆದರ್ಶವಾಗುತ್ತಾನೆ.

ಪ್ರತಿಲೋಮ ವಿವಾಹದ ಪರಿಣಾಮವಾಗಿ ಕಲ್ಯಾಣದಲ್ಲಿ ಕ್ರಾಂತಿ ಸಭವಿಸಿತು. ಸಂಘಟನಾತ್ಮಕ ಶಕ್ತಿ ಒಡೆದು ಹೋಯಿತು. ಬಸವಾದಿಗಳೆಲ್ಲ ತಮಗೆ ದಾರಿ ತೋಚಿದಂತೆಲ್ಲಾ ಚದುರಿ ಹೋದರು. ಅದೇ ಹಿನ್ನೆಲೆಯಲ್ಲಿ ಮಾರಯ್ಯನಿಗೆ ಎಲ್ಲಿಗಾದರೂ ಹೋಗಿ ಐಕ್ಯವಾಗಬೇಕೆಂಬ ಇಚ್ಛೆ ಉಂಟಾಗುತ್ತದೆ. ಇದನ್ನರಿತು ಮಹಾದೇವಿ ಕಾಯವೇ ಕೈಲಾಸವೆಂದ ಮೇಲೆ ಮತ್ತೆ ಬೇರೆ ಕೈಲಾಸವುಂಟೆ? ಎಂದು ಪ್ರಶ್ನಿಸಿ ಮಾರಯ್ಯನ ಕಣ್ಣು ತೆರೆಸುತ್ತಾಳೆ.

ಮಾರಯ್ಯ ಸತಿಯ ಜಾಣ್ಮೆಗೆ ಮೆಚ್ಚಿ ನಿನ್ನ ಭಕ್ತಿಯ ಬೆಳೆಯೇ ಎನಗೆ ಸತ್ಯದ ಹಾದಿ ಎನ್ನುತ್ತಾನೆ. ನಡೆ ನುಡಿ ಶುದ್ಧವುಳ್ಳವರು ಪುರಾತನರ ವಚನವನ್ನೋದಿ ಅನುಭಾವ ಮಾಡಿದಡೆ ಜಗವೆಲ್ಲ ಮೆಚ್ಚುವುದು. ನಡೆನುಡಿ ಶುದ್ಧವಿಲ್ಲದವರು ಪರರಿಗೆ ಉಪದೇಶ ಮಾಡಿದರೆ ಯಾರೂ ಮೆಚ್ಚುವುದಿಲ್ಲ. ಅವರನ್ನು ಮಹಾದೇವಿ ಹಂದಿಗಿಂತ ಕರಕಷ್ಟ ಎಂದು ಹೇಳುತ್ತಾಳೆ.

ದೇಹವೇ ದೇವಾಲಯ, ಕಾಯಕವೇ ಕೈಲಾಸವೆಂದು ಹೇಳುವ ಮಟ್ಟಕ್ಕೆ ಬೆಳೆದಿದ್ದರೂ 'ನಿಮ್ಮ ಭಕ್ತಿ ಸೂತ್ರದಿಂದ ಎನ್ನ ಸ್ತ್ರೀ ಜಾತಿ ನಿಮ್ಮ ಶ್ರೀಪಾದಲ್ಲಿ ಅಡಗಿತ್ತು. ಎನಗೆ ಭಿನ್ನ ಮಾತಿಲ್ಲ' ಎಂದು ತನ್ನ ವಿನಯ ಸಂಪನ್ನತೆಯನ್ನು ಮೆರೆಯುತ್ತಾಳೆ. ಹೀಗೆ ಸತಿಪತಿಗಳೊಂದಾಗಿ ಅನ್ಯೋನ್ಯ ಆಧ್ಯಾತ್ಮ ಜೀವನ ನಡೆಸಿ ಕಲ್ಯಾಣದ ಸಮೀಪದಲ್ಲಿರುವ ಮೋಳಕೇರಿಯಲ್ಲಿಯೇ ಲಿಂಗೈಕ್ಯರಾಗುತ್ತಾರೆ.

## ಶಿವಲೆಂಕ ಮಂಚಣ್ಣ

ಹಿರಿಯ ಶಿವಭಕ್ತ ಹಾಗೂ ವಚನಕಾರ, ಶಿವಲೆಂಕ ಮಂಚಣ್ಣ ಉತ್ತರ ಪ್ರದೇಶದ ವಾರಣಾಸಿಯ ಪಂಡಿತ ಮನೆತನದ ಶಂಭುಭಟ್ಟನ ಮಗ. ಸೋಮಶಂಭು ದೇಶಿಕ ಮಂಚಣ್ಣನ ಅಜ್ಜ, ಶೈವ ಬ್ರಾಹ್ಮಣ ಕೂನಪಾಂಡ್ಯ ವಂಶಕ್ಕೆ ಸೇರಿದವನು. ಇವರದು ಕಾಶಿಯಲ್ಲಿ ಹೆಸರು ವಾಸಿಯಾಗಿದ್ದ ವಿದ್ವಾಂಸರ ಮನೆತನ.

ಮಂಚಣ್ಣನೂ ಸಕಲಾಗಚಾರ್ಯನಾಗಿದ್ದನು. ಶಿವನು ಅಧಿಕನಲ್ಲವೆಂದವರ ಮೂಗನ್ನು ಕೊಯ್ಯುವ ಕತ್ತಿಯೆಂಬ ಬಿರುದಿನ ಪತಾಕೆಯನ್ನು ತನ್ನ ಮನೆಯ ಮೇಲೆ ಎತ್ತಿರಿಸಲು, ವೈಷ್ಣವರೆಲ್ಲರೂ ಆತನೊಡನೆ ವಾದ ಮಾಡಿ ಸೋಲುತ್ತಿದ್ದರು. ಶಿವನು ಅಧಿಕನೆಂಬುದಕ್ಕೆ ದೃಷ್ಟಾಂತವೇನೆನಲು, ಕಾಶಿಯಲ್ಲಿದ್ದ ಬಿಂದು ಮಾಧವ ಮೂರ್ತಿಯನ್ನು ವಿಶ್ವೇಶ್ವರನ ಗುಡಿಗೆ ನಡೆದು ಬಂದು ನಮಸ್ಕರಿಸುವಂತೆ ಮಾಡಲು ವೈಷ್ಣವರು ಈತನಿಗೆ ಶರಣಾದರು. ಹೀಗೆ ಶಿವಾಧಿಕ್ಯವನ್ನು ಸಾರುತ್ತಾ ಅನೇಕ ವಾದಗಳಲ್ಲಿ ಪರವಾದಿಗಳನ್ನು ಜಯಿಸುತ್ತ ಸಂಚಾರ ಗೈದ ಅನುಭವಿ. ಕಲ್ಯಾಣಕ್ಕೆ ಬಂದು ಬಸವಣ್ಣ ಮೊದಲಾದ ಪ್ರಮಥರನ್ನು ಸಂದರ್ಶಿಸಿ ಧನ್ಯನಾದನು. ಕರುಳು, ಬೆರಳು, ಉರ ಮೂರನ್ನು ಕೊಯ್ದು ದಿನಂಪ್ರತಿ ಲಿಂಗಕ್ಕರ್ಪಿಸಿ ಮತ್ತೆ ಪಡೆಯುತ್ತಿದ್ದನೆಂಬ ಮಹಿಮೆ, ಪವಾಡಗಳು ವೀರಶೈವಾಮೃತ ಮಹಾಪುರಾಣ, ಶಿವತತ್ವ ಚಿಂತಾಮಣಿ, ಚೆನ್ನಬಸವ ಪುರಾಣ ಸಿಂಗಿರಾಜ ಪುರಾಣ, ಬಸವಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಮೊದಲಾದ ಕೃತಿಗಳಲ್ಲಿ ವ್ಯಕ್ತವಾಗಿದೆ. ಅನುಭವ ಮಂಟಪದ ಸದಸ್ಯನಾಗಿ ಶಿವನಾನುಭವಿಯಾಗಿದ್ದ ಮಂಚಣ್ಣ ಕಲ್ಯಾಣದಲ್ಲಿಯೇ ಸಮಾಧಿಸ್ಥನಾದನು.

ಈಶಾನ್ಯ ಮೂತಿ ಮಲ್ಲಿಕಾರ್ಜುನ ಲಿಂಗ ಮುದ್ರಿಕೆಯ ಈತನ ೧೩೨ ವಚನಗಳು ದೊರೆತಿವೆ. ಅಷ್ಟಾವರಣ, ಷಟ್‌ಸ್ಥಲಗಳ ಪ್ರತಿಪಾದನೆ ಮಾಡುವ ಮಂಚಣ್ಣನ ವಚನಗಳು ಸರಳ ಶೈಲಿಯಲ್ಲಿವೆ. ಸದೃಢವಾದ ಮನಸ್ಸಿರುತ್ತದೆ ಎಂಬ ಮಾತನ್ನು ಮಂಚಣ್ಣ ಸಮರ್ಥಿಸುತ್ತ ಕ್ರಿಯೆ ಜ್ಞಾನಕ್ಕೆ ಒಡಲಾಗಿದ್ದು ಅದನ್ನು ಮರೆದಲ್ಲಿ ಶರೀರ ದುರ್ಬಲಗೊಂಡು ಮಾನಸಿಕ ಸಮತೋಲನಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಅರಿವು ಹೀನವಾಗುತ್ತದೆ ಎನ್ನುತ್ತಾನೆ. ದೈಹಿಕ ಮತ್ತು ಮಾನಸಿಕ ಸಬಲೀಕರಣಕ್ಕೆ ಯಾವುದಾದರೊಂದು ಕ್ರಿಯೆಯನ್ನು ಕೈಗೊಳ್ಳುವುದು ಅನಿವಾರ್ಯವೆಂದನು. ಅದನ್ನೇ ಕಾಯಕವನ್ನಾಗಿ ಪರಿವರ್ತಿಸಿ ಸೂಕ್ಷ್ಮ ವಿವೇಚನೆಗೆ ತೊಡಗಿದ್ದನ್ನು ಇಲ್ಲಿ ಗಮನಿಸಬಹುದು.

"ಕಾಯಕವೆಂದು ಕಾಯುವ ಬಳಲಿಸದೆ
ತನುಮನ ಕರಗದೆ, ಮನ ನೋಯದೆ
ಕಾಡಿಬೇಡಿ ಮಾಡುವುದು ದಾಸೋಹವೇ?
ಆವ ಕಾಯವು ಪ್ರಾಣವೆ ಕಡೆಯಾಗಿ, ದ್ರವ್ಯ ಮೊದಲಾಗಿ
ಚಿತ್ತ ಶುದ್ಧದಲ್ಲಿ ಗುರುಚರಕ್ಕೆ ಮುಯ್ಯಾಂತು ಬಂದುದಕ್ಕೆ ಸರಿಗಂಡು
ಲಿಂಗದೇಹಿಗಳಿಗೆಲ್ಲಾ ಒಂದೇ ಪ್ರಮಾಣದಲ್ಲಿ ಸಂದುದು
ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗಕ್ಕೆ ತೃಪ್ತಿ"

ಲಿಂಗಕ್ಕೆ ತೃಪ್ತಿಯಾಗಲು ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳಲ್ಲಿ ಸಿಲುಕದೆ ಸರಳಜೀವನ ನಡೆಸಬೇಕು. ತನು ಮನವನ್ನು ನಿರಂತರವಾಗಿ ಕಾಯಕದಲ್ಲಿ ಬಳಲಿಸಬೇಕು. ಆ ಕಾಯಕಗಳೆಲ್ಲ ಒಳ್ಳೆಯವು ಆಗಿರಬೇಕು. ಕಾಯಕದ ಪ್ರತಿಫಲವನ್ನು ಗುರುಲಿಂಗ ಜಂಗಮದ ಮುಂದಿಟ್ಟು ಅರ್ಪಿಸಬೇಕು. ಅರ್ಪಿಸಿಕೊಳ್ಳುವಾತ, ಅರ್ಪಿಸುವಾತ ಕಣ್ಣು ಮನಸ್ಸು ದಣಿಯದಂತೆ ಹರ್ಷಿಸಬೇಕೆನ್ನುತ್ತಾನೆ. ಅರ್ಪಿಸಿದ ಮೇಲೆ ಮಿಕ್ಕುಳಿಯುವ ಶೇಷ ಪ್ರಸಾದವನ್ನು ಇಷ್ಟ ಪ್ರಾಣಲಿಂಗಕ್ಕೆ ತೃಪ್ತಿ ಪಡಿಸುವ ಮಹಾಭಕ್ತನಿಗೆ ಸಂಸಾರವೆಂಬ ತೊಟ್ಟು ಹರಿಯುತ್ತದೆಂಬ ವಿನೂತನ ಸಂಗತಿಯನ್ನು ಪ್ರಸ್ತಾಪಿಸಿದ್ದಾನೆ.

ಗೋಮುಖ ವ್ಯಾಘ್ರದಂತೆ ಬಹುರೂಪಿಗಳಾಗಿ ವರ್ತಿಸುವ ಜನರನ್ನು ಇಲ್ಲಿ ಖಂಡಿಸಿದ್ದಾನೆ. ಭಾಷೆಯಂತೆ ಅಂಗವಿಲ್ಲದವರನ್ನು ಜಗಮೆಚ್ಚದು. ಹೊರಗೆ ಸ್ವಯಂಪಾಕಿಗಳೆಂದು ಹೇಳಿಕೊಂಡು ಒಳಗೆ ಅಧರ ಪಾಕ ಸೇವಿಸುವರನ್ನು, ಹೊರಗೆ ಭವಿ ನಿರಸನವೆಂದೆನ್ನುತ್ತ ಒಳಗೆ ಭವಿಸಂಗದಲ್ಲಿರುವ ಕಪಟಿಗಳನ್ನು ಈಶಾನ್ಯ ಮೂರ್ತಿ ತಿರಸ್ಕರಿಸುವುದು ಸತ್ಯ ಎನ್ನುತ್ತಾನೆ. ಹಾಗಾಗಿ ಭಕ್ತನಾದವನು ಪರಧನವನ್ನೊಲ್ಲದಿಪ್ಪುವ ವ್ರತವನ್ನು ಕೊಲ್ಲದಿರುವ ನೇಮವನ್ನು; ತಥ್ಯಮಿಥ್ಯವನಳಿದಿಪ್ಪುವ ನಿತ್ಯನೇಮವನ್ನು ಯಾವುದೇ ಸಂದೇಹವಿಲ್ಲದೆ ಪಾಲಿಸಿಕೊಂಡು ಹೋಗಬೇಕೆನ್ನುತ್ತಾನೆ ಮಂಚಣ್ಣ.

ವೇದ ಅಪರನರಸಿತು ಪುರಾಣ ಪುಣ್ಯವ ಬಯಸಿತ್ತು
ಶಾಸ್ತ್ರ ಗೆಲ್ಲ ಸೋಲಕ್ಕಾಳಗಾದಲ್ಲಿ, ಶೃತಿ ನಾದದೊಳಗೆ ಸಿಲ್ಕಿತ್ತು
ನಾದ ಶೃತಿ ಬಿಂದುವಿನಲ್ಲಿ ನಿಂದು ಗೋಳಕಾಕಾರವಾದಲ್ಲಿ
ತ್ರಿವಿಧಕ್ಕೆ ಹೊರಗಾಯಿತು ........ ಲಿಂಗವು ಸ್ವಯಂಭುವಾದ

ನಾಲ್ಕು ವೇದಗಳು, ಹದಿನೆಂಟು ಪುರಾಣಗಳು, ಲೆಕ್ಕಕ್ಕೆ ಸಿಗಲಾರದಷ್ಟು ರಚನೆಗೊಂಡಿರುವ ಶಾಸ್ತ್ರ ಶ್ರುತಿಗಳೆಲ್ಲದರ ಉದ್ದೇಶ ನಿರ್ದಿಷ್ಟ ರೀತಿಯ ಫಲಾಪೇಕ್ಷೆಯನ್ನು ಬಯಸುವುದಾಗಿದೆ. ಹಾಗಾಗಿ ಅವುಗಳೆಲ್ಲ ತ್ರಿವಿಧಕ್ಕೆ ಹೊರಗಾದವು. ಅವುಗಳಿಂದ ಪ್ರಯೋಜನವಿಲ್ಲವೆಂದು ತಿರಸ್ಕರಿಸುವುದು ಗಮನಾರ್ಹವಾಗಿದೆ. ಅದೊಬ್ಬ ಶೈವ ಪರಂಪರೆಯ ವ್ಯಕ್ತಿಯಾಗಿ, ಪ್ರತಿನಿಧಿಯಾಗಿದ್ದುಕೊಂಡು ಹೀಗೆ ಹೇಳುವುದು ಸಾಮಾನ್ಯ ಸಂಗತಿಯಲ್ಲ.

ಜಲದೊಳಗಣ ಮತ್ಸ್ಯ, ವನದೊಳಗಣ ಮರ್ಕಟ
ಆಕಾಶದ ಪಕ್ಷಿ ಇವು ಕೂಡಿದ ಮಾತಾಡುವಲ್ಲಿ
ಶಬರ ಮತ್ಸ್ಯವ ನೋಡಿ, ಜೋಗಿ ವನ ಚರವ ಕಂಡು
ಅಂಟಿನ ಡೊಂಬ ಹಕ್ಕಿಯ ಕಂಡು
ಇಂತೀ ಮೂವರ ಹದ ಕೆಡಿಸಿತ್ತು
ಕಾರಮಳೆ ಸೋನೆ ಎದ್ದು ಸುರಿಯಿತ್ತು
ಇಂತೀ ಇನ್ನಾರ ಕೇಳುವೆ?
ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗವೆ ನೀನೆ ಬಲ್ಲೆ

ಇದೊಂದು ಬೆಡಗಿನ ವಚನವಾಗಿದ್ದು, ಸಿಂಗಳದ ಸಿದ್ಧ ಬಸವರಾಜ ದೇವರು ಈ ವಚನವನ್ನು ಹೀಗೆ ಅರ್ಥೈಸಿದ್ದಾರೆ. ಸಂಸಾರ ವಿಷಯ ಜಲ ಪ್ರವಾಹದಲ್ಲಿ ಮತ್ಸ್ಯನೆಂಬ ಜೀವನ ಆಚರಿಸುತ್ತಿಹನು. ಷಡಾಧಾರ ಚಕ್ರದಲ್ಲಿ ಐವತ್ತೊಂದು ದಳಗಳಲ್ಲಿ ಸಂಕಲ್ಪ ವಿಕಲ್ಪ ಭಾವದಿಂದ ಮನಸ್ಸೆಂಬ ಮರ್ಕಟ ಹಾರಾಡುತ್ತಿದೆ. ಆತ್ಮಾಕಾಶದ ಮಧ್ಯದಲ್ಲಿ ಸ್ವಲೀಸಲಾಪರವಾತಿರುವುದೇ ಆಕಾಶವೆಂಬ ಪಕ್ಷಿ. ಹೀಗೆ ಜೀವಾತ್ಮ ಮನಸ್ಸು, ಪರಮಾತ್ಮನು ತಮ್ಮ ತಮ್ಮ ಪ್ರಪಂಚ ವರ್ತನೆಯ ಶಬ್ದಜಾಲದೊಳಗೆ ಸಿಲ್ಕಿ ಸಂದಣಿಗೊಳ್ಳುತ್ತಿದ್ದಾರೆ. ಭಿನ್ನಭಾವದಿಂದ ಆಚರಿಸುತ್ತಿರುವ ದ್ವೈತಿಗಳು ಜೀವನ ವರ್ತನೆಯ ಕ್ರಿಯೆಯಿಂದ; ಲಕ್ಷಯೋಗಿಗಳು ಅಂತರ್ಲಕ್ಷ ಸಂಧಾನದಿಂದ, ಮನೋವರ್ತನೆಯಿಂದ ನಿಲ್ಲಿಸಬೇಕೆಂದು ಹೇಳಲಾಗಿದೆ. ಆತ್ಮಜ್ಞಾನದಿಂದ ಅದ್ವೈತಿಗಳು ಪರಮಾತ್ಮ ತತ್ವವನ್ನು ಗ್ರಹಿಸಬೇಕು. ಅಂದಾಗಲೇ ಅಭ್ರ ಛಾಯಾ ಮಾತ್ರವಾದ ಮಾಯಡಂಬರವೆಂಬ ಮೇಘದಲ್ಲಿ ಸಂಸಾರ ವಿಷಯ ರಸವೆಂಬ ವೃಷ್ಟಿ ಸರ್ವಾಂಗದಲ್ಲಿ ಕರೆಯಲು ದ್ವೈತಾದ್ವೈತ ಯೋಗಮಾರ್ಗಿಗಳ ಬಯಕೆ ನಷ್ಟವಾಗುತದೆ. ತ್ರಿಕಾಂಡಿಗಳು ಶಿವತತ್ವಕ್ಕೆ ಭಿನ್ನವಾಗಿ ಹೋದ ಭೇದದ ಶರಣ ಕಂಡ ಆಶ್ಚರ್ಯವೆ ಪ್ರಸ್ತುತ ವಚನದ ಅಂತರವಾಗಿದೆ. ಇಂತಹ ಕೆಲವೊಂದು ವಚನಗಳು ಶಿವ ಲೆಂಕ ಮಂಚಣ್ಣ ರಚಿಸಿದ್ದು. ಪ್ರತಿಭೆ ಮತ್ತು ವಿದ್ವತ್ತಿನ ಪ್ರತೀಕವಾಗಿದೆ.

ಸೊನ್ನಲಾಪುರದ ಒಕ್ಕಲಿಗ ಪ್ರೆರಡಿಯ ಮುದ್ದಗೌಡ ಸುಗ್ಗವ್ವೆಯರ ಮಗ. ರೇವಣಸಿದ್ಧರ ಆಶೀರ್ವಾದದಿಂದ ಅಪರೂಪವಾಗಿ ಜನಿಸಿದ ಮಗನಿಗೆ ಸಿದ್ಧರಾಮ ಎಂದು ನಾಮಕರಣ ಮಾಡಿದರು. ಹೆತ್ತವರು ಪ್ರೀತಿಯಿಂದ ಮನೆದೈವ ಧೂಳಿ ಮಾಕಾಳನ ಹೆಸರಿನಿಂದ ಕೂಗಿದರೆ ಸಿದ್ಧರಾಮ ಸ್ಪಂದಿಸುತ್ತಿರಲಿಲ್ಲ. ಬಾಲ್ಯದಲ್ಲಿ ದನ ಕಾಯುತ್ತಿದ್ದನು. ಮಧ್ಯಾಹ್ನದ ವೇಳೆಗೆ ಮ್ಮರದಡಿಯಲ್ಲಿ ಶಿವಲಿಂಗವನ್ನು ಪೂಜಿಸ್ಮತ್ತಾ ಕುಳಿತು ಬಿಡುತ್ತಿದ್ದ. ಸಾಯಂಕಾಲ ಎಲ್ಲರೊಡನೆ ಮನೆ ಸೇರುವುದು ದಿನಚರಿಯಾಗಿತ್ತು. ಮುಗ್ಧಜೀವಿ ದನಗಾಹಿಯಾಗಿದ್ದಾಗಲೇ ಅಂಬಲಿ ಹಾಗೂ ನವಣೆಯ ಸಿಹಿತೆನೆ ಪವಾಡ ಜರುಗುತ್ತದೆ. ಆ ದಿನ ಜಂಗಮ ಮೂರ್ತಿಯ ದರ್ಶನಾಶೀರ್ವಾದದಿಂದ ಶ್ರೀಶೈಲದವರೆಗೂ ಪ್ರಯಾಣ ಬೆಳೆಸಿ ಚೆನ್ನಮಲ್ಲಿಕಾರ್ಜುನನನ್ನು ಕಂಡ ಪುಣ್ಯಜೀವಿ. 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು. ಅನುಗೊಂಬನಿತು ಕಾಯಕಂ ನಡೆಯುತ್ತಿರಬೇಕು'. ಎಂಬ ತತ್ವವನ್ನು ಸಿದ್ಧರಾಮ ತನ್ನ ಬದುಕಿನಲ್ಲಿ ಅಳವಡಿಸಿಕೊಂಡ ದಿವ್ಯ ಮಂತ್ರವಾಗಿದೆ. ಸ್ಥಾವರ ದೇವಾಲಯ, ಕೆರೆ ಬಾವಿಗಳ ನಿರ್ಮಾಣ; ಋಣ ಪರಿಹಾರ ಮೊದಲಾದ ಮಾನವೀಯ ಕೆಲಸಗಳನ್ನು ಮಾಡುತ್ತ ಸ್ವಗ್ರಾಮದಲ್ಲಿ ಜನಿಸುತ್ತಿದ್ದ ಸಿದ್ಧರಾಮೇಶ್ವರರನ್ನು ಕರ್ಮಯೋಗದಿಂದ ಶಿವಯೋಗದ ಕಡೆಗೆ ತಿರುಗಿಸಿ, ಅವರನ್ನು ಶರಣು ಬಳಗಕ್ಕೆ ಪರಿಚಯಿಸಿದ ಕೀರ್ತಿ ಅಲ್ಲಮ ಪ್ರಭುವಿಗೆ ಸಲ್ಲುತ್ತದೆ.

ಸಿದ್ಧರಾಮನ ಜೀವನವನ್ನು ಎರಡು ಘಟ್ಟಗಳಲ್ಲಿ ವಿಂಗಡಿಸಬಹುದು. ಒಂದು ಲೋಕೋಪಕಾರದ ಸರ್ವಜೀವ ದಯಾಪರ ಜೀವನ. "ಸಾಕಾರ ನಿಷ್ಠೆ ಸಿದ್ಧರಾಮನಿಗೆ ಅಗತ್ಯವಿಲ್ಲವಾದರೂ ಅದು ಲೋಕದ ಜನರಿಗಾಗಿ ಬೇಕಾಗಿದೆ. ಜನರ ನಂಬಿಕೆಗಳನ್ನು ಸಿದ್ಧರಾಮ ಪ್ರಶ್ನಿಸುವವನಲ್ಲ. ಏಕೆಂದರೆ ಸಾಕಾರ ನಿಷ್ಠೆ ಭಾರತೀಯ ನರನಾಡಿಗಳಲ್ಲಿ ಹಂಚಿಹೋಗಿರುವ ಭಾವನೆ. ಜನರ ಭಾವನೆಯನ್ನು ಗೌರವಿಸಲು ಅವನು ದೇವಾಲಯ ನಿರ್ಮಾಣ, ಲಿಂಗ ಪ್ರತಿಷ್ಠೆ ಇತ್ಯಾದಿಗಳನೆಲ್ಲಾ ಮಾಡುವನು. ಅವನು ದಯಾ ಸಮುದ್ರನಾಗಿರುವುದರಿಂದ ಸರ್ವಜೀವಾವಳಿಗಳ ಕ್ಷೇಮ ಚಿಂತನೆ ಮಾಡುವನು ಹೆಂದಣದನು ಮೊದಲಿರುಹೆ ಪಶುಪಕ್ಷಿ ಮೃಗವಾನೆಗಳ ಹಿತವನ್ನು ಬಯಸುವನು. ಭೊದಾನ, ಗೋದಾನ, ಕನ್ಯಾದಾನ, ವಸ್ತ್ರದಾನ, ಮಹಿಷದಾನ, ಅನ್ನದಾನಗಳನ್ನು ಮಾಡುವನು. ಸಾಕಾರ ನಿಷ್ಠೆಯಿಂದ ಬರುವ ಆತ್ಮಕಲ್ಯಾಣವು ಭೋತಾನುಕಂಪೆಯಿಂದ ದೊರೆಯುವ ಲೋಕ ಕಲ್ಯಾಣವು ಅಹಂ ಅಹಮಿಕೆಯಿಂದ ವೃದ್ಧಿಗೊಂಡಾಗ ಅವು ಸಮಸ್ತ ಸನ್ಮಂಗಳ ಸ್ವರೂಪಿಯಾದ ಪರಬ್ರಹ್ಮನಲ್ಲದೆ ಮತ್ತೇನು? ಈ ತತ್ವದ ತಳಹದಿಯ ಮೇಲೆ ಸಿದ್ಧನ ಚರಿತ್ರೆ ಕವಿಯಿಂದ ನಿರ್ಮಿತವಾಗಿದೆ". ಲೋಕ ಕಲ್ಯಾಣ ಜೀವನವನ್ನು ನಿರಾಕರಿಸದೆ ಅನುಭಾವವನ್ನು ಸಂಪಾದಿಸುವ ಕಡೆಗೆ ಲಕ್ಷ್ಯವಿರುವ ಜೀವನ.

ಎರಡನೇಯ ಈ ಹಂತದ ಜೀವನಕ್ಕೆ ಭೂಮಿಕೆ ಒದಗಿಸಿದ್ದು ಕಲ್ಯಾಣ. ಶಿವಶರಣರ ಮಹೋನ್ನತ ವ್ಯಕ್ತಿತ್ವಕ್ಕೆ ಮಾರುಹೋಗುವ, ಸ್ಪಂದಿಸುವ ವಿಶಾಲ ಗುಣ ಸಿದ್ಧರಾಮನಲ್ಲಿ ಕಂಡು ಬರುತ್ತದೆ.

ಸಿದ್ಧರಾಮ ಚಾರಿತ್ರ್ಯ ಪ್ರಸ್ತಾಪಿಸಿದ ಬಿಲ್ಲೇಶಬೊಮ್ಮಯ್ಯನ ಪ್ರಸಂಗ, ಎಲೇಶನಿಗೆ ಪ್ರಾಣವಿತ್ತ ಪಸ್ರಂಗಗಳು ಸಿದ್ಧರಾಮನ ಮಾನವೀಯತೆಯ ಪರಾಕಾಷ್ಠೆಯನ್ನು ಎತ್ತಿ ತೋರಿಸುತ್ತದೆ. "ಅರವತ್ತೆಂಟು ಸಾವಿರ ವಚನಂಗಳು ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯಾ....." ಎಂದು ಸಿದ್ಧರಾಮ ಹೇಳಿದ್ದರೂ ಕಪಿಲಸಿದ್ಧ ಮಲ್ಲಿಕಾರ್ಜುನ ಮುದ್ರಿಕೆ ೧೬೭೯ ವಚನಗಳು ಮಾತ್ರ ದೊರೆತಿವೆ. ಈ ವಚನಗಳು ಧಾರ್ಮಿಕ ಆವರಣಗಳನ್ನು ತೆರೆದಿಡುವುದರ ಜೊತೆಗೆ ಲೋಕಾನುಭವ, ಸಮಾಜ ವಿಮರ್ಶೆ, ಅಂತರಂಗ ನಿರೀಕ್ಷಣೆಯ ಅಂಶಗಳನ್ನು ಒಳಗೊಂಡಿವೆ.

ಸಿದ್ಧರಾಮಶ್ವರನು ಪ್ರಭುದೇವರೊಡನೆ ಪ್ರಥಮ ಸಲ ಕಲ್ಯಾಣಕ್ಕೆ ಬರುವ ಮುನ್ನವೆ ತ್ರಿಪದಿಗಳನ್ನು ರಚಿಸಿರಬಹುದು. ಆದರೆ ಬಸವ ಸ್ತೂತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟಾವರಣೆ ತ್ರಿವಿಧಿಗಳನ್ನು ಕಲ್ಯಾಣಕ್ಕೆ ಬಂದ ಮೇಲೆ ಬರೆದಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಯೋಗಿನಾಥ ಅಂಕಿತದಲ್ಲೂ ಬರೆಯಲಾದ ಸಾಹಿತ್ಯವು ಇದೆ.

ಹಿಂದೆ ಬಯಸಿದೆ ಕಾಳುತನದಲ್ಲಿ
ಎನ್ನ ಮಂದಮ್ಮತಿಯ ನೋಡಿದಿರಯ್ಯಾ ।
ಕೆರೆ ಬಾವಿ ಹೂದೋಟ ಚೌಕ ಛತ್ರಂಗಳ ಮಾಡಿ,
ಜೀವಂಗಳ ಮೇಲೆ ಕೃಪೆಯುಂಟೆಂದು ಎನ್ನ ದಾನಿ ಎಂಬರು
ಆನುದಾನಿಯಲ್ಲವಯ್ಯಾ, ನೀ ಹೇಳಿದಂತೆ ನಾ ಮಾಡಿದೆನು
ನೀ ಬರಹೇಳಿದ್ದಲ್ಲಿ ಬಂದೇನು ನೀ ಇರಿಸಿದಂತೆ ಇದ್ದೇನು
ನಿನ್ನಾ ಇಚ್ಛಾ ಮಾತ್ರವ ಮೀರಿದೆ ನಾಯಿತಾದರೆ ನಿಮ್ಮಾಣೆ
ಕಪಿಲಸಿದ್ದ ಮಲ್ಲಿಕಾರ್ಜುನಯ್ಯಾ
ಭವಕ್ಕೆ ಭರಿಸದಿರಯ್ಯಾ ನಿಮ್ಮ ಧರ್ಮ

ಇದುವರೆಗೆ ಮಾಡಲಾದ ಪುಣ್ಯ ಕಾರ್ಯಗಳ ಫಲ, ಪುಣ್ಯ ತನ್ನದಲ್ಲ ತನ್ನ ಆರಾಧ್ಯ ದೇವರ ಮಾರ್ಗದರ್ಶನದಂತೆ ನಡೆದಿರುವೆ ಎನ್ನುವ ಸಮರ್ಪಣಾ ಭಾವವನ್ನು ಇಲ್ಲಿ ಕಾಣಬಹುದಾಗಿದೆ. ಇಂದು ಎಲ್ಲಾ ಕಡೆಗಳಲ್ಲೂ ಕಂಡು ಕೇಳುವ ಮಾತೆಂದರೆ ಕೆಲಸವಿಲ್ಲ. ಅದು ನನ್ನಿಂದ ಸಾಧ್ಯವಿಲ್ಲ. ಹೀಗೆ ಮಾತನಾಡುವಾತ ಸೋಮಾರಿ ಎನ್ನುತ್ತಾನೆ ಸಿದ್ಧರಾಮ. 'ನೆಲೆಗೊಳ್ಳದ್ದು ಎಂದು ಬಿಡಬಾರದಯ್ಯಾ' ಎಂಬುವುದು ಆತನ ಪ್ರಸಿದ್ಧೋಕ್ತಿ. ನಿನಗೆ ನೀನೆ ಕರ್ತನಾಗಿ ಬದುಕನ್ನು ರೂಪಿಸಿಕೊಳ್ಳಬೇಕು. ವಾಮ ಮಾರ್ಗದ ಅನ್ಯ ಭಾವಗಳಿಗೆ ಮನಸ್ಸು ಎಳೆಸದೆ ನಿನ್ನ ನೊಲಿಸುವಡೆ ನಿಹಂ ಭಾವವೆ ತೃಪ್ತಿಯನ್ನು ಒದಗಿಸುತ್ತದೆ. ಹೊನ್ನು, ಹೆಣ್ಣು, ಮಣ್ಣನ್ನೆ ನಂಬಿ ಕೆಡದ ಅಂತರಂಗ ನಿರ್ಮಾಣ ಕಾರ್ಯದಲ್ಲಿ ನಿರತನಾಗಬೇಕೆನ್ನುತ್ತಾನೆ ಸಿದ್ಧರಾಮ ಶಿವಯೋಗಿ.

ಒಬ್ಬರ ಮನವ ನೋಯಿಸಿ
ಒಬ್ಬರ ಮನವ ಘಾತವ ಮಾಡಿ
ಗಂಗೆಯ ಮುಳುಗಿದಡೆನಾಗುವ್ವದಯ್ಯಾ?
ಚಂದ್ರನು ಗಂಗೆಯ ತಡಿಯಲ್ಲಿದ್ದಡೇನು?

ಕಲಂಕ ಬಿಡದಾಯಿತ್ತಯ್ಯಾ
ಅದು ಕಾರಣ ಮನವ ನೋಯಿಸದವನೆ
ಒಬ್ಬರ ಘಾತವ ಮಾಡದವನೇ ಪರಮ ಪಾವನ ನೋಡಾ

ಎಂದಿದ್ದಾನೆ. ಮುಕ್ತಿ ಕೈಲಾಸದ ಭ್ರಾಂತಿಯಿಂದ ಕಲ್ಲು ಮುಳ್ಳು ವೃಣ್ಣಿನಲ್ಲಿ ತಿರು ತಿರುಗಿ ವ್ಯರ್ಥ ಕಾಲ ಹರಣ ಮಾಡುವುದು; ಅಷ್ಟಾಷಷ್ಟಿ ಕೋಟಿ ತೀರ್ಥದಲ್ಲಿ ಮಿಂದೇಳುವುದು; ಕಾಶಿ, ರಾಮೇಶ್ವರ, ಶ್ರೀಶೈಲ, ಕೇದಾರ, ಮುಂತಾದ ಶಿವಲಿಂಗಗಳ್ನು ದರ್ಶಿಸುವುದು, ಹೋಮ, ಹವನಗಳಾದಿ ನೇರವೇರಿಸುವದು, ಭಕ್ತಿ ಧ್ಯಾನದಲ್ಲಿ ಮನಸ್ಸನ್ನು ನೆಲೆಗೊಳಿಸದಿರುವುದ ಒಳ್ಳೆಯದಲ್ಲ ಏಕೆಂದರೆ ಶಿವಭಕ್ತನ ಮನೆಯ ಅಂಗಳವೇ ಕಾಶಿ, ವಾರಾಣಾಸಿ. ಅವನ ಮನಸ್ಸೆ ಮಹಾದೇವನ ಅರಹು. ಅದು ಸಂಕಲ್ಪ ವಿಕಲ್ಪವೆಂಬ ಚಂಚಲ ಸ್ವರೂಪವನ್ನು ದಿಕ್ಕರಿಸ್ತುತ್ತದೆ. ಅಂದರೆ ಸಂಕಲ್ಪ ವಿಕಲ್ಪಗಳು ಅಳಿದಾಗ ಅದೇ ಮಹಾಜ್ಞಾನಿಯಾಗಿ ಮಹಾಶಕ್ತಿಯಾಗಿ ಪರಿಣಮಿಸುತ್ತದೆ.

ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತಕ್ಕಲ್ಲ ನೋಡಯ್ಯಾ
ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತಕ್ಕಲ್ಲಾ ನೋಡಯ್ಯಾ
ತಮ್ಮ ಬಿಟನ್ಯಾಹಿತವ ನೋಡಿದರೆ
ಕೂಡಿಕೊಂಬ ನಮ್ಮ ಕಪಿಲಸಿದ್ಧ ಮಲ್ಲಯ್ಯನವರ
ದುಷ್ಕರ್ಮಂಗಳ ಮಾಡುವರನಂತರುಂಟು
ಸತ್ಕರ್ಮಂಗಳ ಮಾಡುವರೊಬ್ಬರು ಇಲ್ಲ ನೋಡಯ್ಯಾ
ದುಷ್ಕರ್ಮವೆಂದರೆ ವಿಷಯವಾಸನೆ
ಸತ್ಕರ್ಮವೆಂದರೆ ಕಪಿಲ ಸಿದ್ಧ ಮಲ್ಲಿಕಾರ್ಜುನನ ಕೂಡುವ ವಾಸನೆ

ಸ್ವಾರ್ಥಪರತೆ, ದುಷ್ಕರ್ಮ, ಕೃತಕ ಭಕ್ತಿ ಡಂಬಾಚಾರಗಳಾದಿ, ಖಂಡಿಸುವವನಾಗಿ, ಸಮಾಜ ಸೇವಕನಾಗಿ, ಅಂತರಂಗ ಶುದ್ಧಿಗೊಳಿಸುವವನಾಗಿ, ಕವಿಯಾಗಿ, ವಚನಕಾರನಾಗಿ ಮೇಲಾಗಿ ಅಪ್ಪಟ ಶಿವಭಕ್ತನಾಗಿ ಕನ್ನಡಿಗರ ಹೃದಯ ಗೆದ್ದ ಮಹಾಶರಣ ಶಿವಯೋಗಿ ಸಿದ್ಧರಾಮೇಶ್ವರ.

## ಅಕ್ಕಮಹಾದೇವಿ

ಹನ್ನೆರಡನೇಯ ಶತಮಾನದಲ್ಲಿ ಆಗಿ ಹೋದ ಮೂವರು ಪ್ರಸಿದ್ಧ ಶರಣರಲ್ಲಿ ಅಕ್ಕಮಹಾದೇವಿ ಒಬ್ಬಳು. ಇನ್ನೊಬ್ಬರೆಂದರೆ ಜಗಜ್ಯೋತಿ ಬಸಬಣ್ಣ ಮತ್ತು ಅನುಭವ ಮಂಟಪದ ಸ್ಥಾಪಕ ಅಲ್ಲಮ ಪ್ರಭುಗಳು. ಅಲ್ಲಮ ಪ್ರಭುಗಳ ಜನ್ಮ ಸ್ಥಳವಾದ ಇಂದಿನ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯ ಸಮೀಪವೇ ಅಕ್ಕಮಹಾದೇವಿ ಅವರ ಜನ್ಮ ಸ್ಥಳವಿದೆ. ಬಳ್ಳಿಗಾವಿಯ ಸಮೀಪ ಉಡುತಡಿಯ ಸುಮತಿ ನಿರ್ಮಲರೆಂಬ ದೈವಭಕ್ತ ದಂಪತಿಗಳ ಮಗಳು ಮಹಾದೇವಿ. ಈ ದೈವ ಭಕ್ತ ದಂಪತಿಗಳಿಗೆ ಮಹಾದೇವಿಯ ಸಕಲಗಳು ಆಗಿದ್ದರು. ಏಕೆಂದರೆ ಅವರಿಗೆ ಗಂಡು ಸಂತಾನವಿರಲಿಲ್ಲ.

ಮಹಾದೇವಿ ಬಾಲ್ಯದಲ್ಲಿ ತಂದೆ ತಾಯಿಯಿಂದ ಶಿವಭಕ್ತಿಯ ಮಹಿಮೆಯನ್ನು ಅರಿತುಕೊಂಡು ಆಗಿನಿಂದಲೇ ಸದಾ ಕಾಲ ಶಿವಧ್ಯಾನದಲ್ಲಿ ತೊಡಗಿರುತ್ತಿದ್ದಳು. ಮುಂದೆ ಕಾಲ ಸರಿದಂತೆ ಅಕ್ಕಮಹಾದೇವಿಯು ಚೆಲುವೆಯಾಗಿ ಮುಗ್ಧಳಾಗಿ ಶಿವಭಕ್ತೆಯಾಗ ರೂಪಗೊಂಡಳು. ಪ್ರಾಪ್ತ ವಯಸ್ಸು ಬರುವವರೆಗೆ ನಿರಾಭರಣ ಸುಂದರಿಯಾಗಿ ಕಂಡಳು.

ಒಮ್ಮೆ ಆ ಊರಿನ ಅರಸನಾದ ಕೌಶಿಕನು ತನ್ನ ಛತ್ರಚಾಮರಗಳೊಂದಿಗೆ ರಾಜ ಬೀದಿ ಮೆರವಣಿಗೆಯಲ್ಲಿ ಹೋಗುತ್ತಿದ್ದಾಗ ತನ್ನ ಮೆರವಣಿಗೆಯನ್ನು ನೋಡಲೆಂದು ಮನೆಯ ಹೊರಗೆ ಬಂದಿದ್ದ ಅಕ್ಕಮಹಾದೇವಿಯನ್ನು ಕಂಡನು. ದೊರೆ ಕೌಶಿಕನ ಅವಳಲ್ಲಿ ಮೋಹಕ ಪರವಶನಾದನು. ಕೊನೆಗೆ ಕೌಶಿಕನು ಅವಳ ಮೋಹಕ್ಕೆ ಮನಸೋತು ಅವಳನ್ನು ಮದುವೆಯಾಗಲು ಆಪೇಕ್ಷಿಸಿ ಅವಳ ತಂದೆ ತಾಯಿಯನ್ನು ತನ್ನ ಅರಮನೆಗೆ ಬರುವಂತೆ ಭಟ್ಟರಿಂದ ತಿಳಿಸಿದನು. ಈ ಮದುವೆ ಮಹಾದೇವಿಗೆ ಇಷ್ಟವಿಲ್ಲದಿದ್ದರೂ ತಾನು ನಿರಾಕರಿಸಿದರೆ ತನ್ನನು ಹೆತ್ತವರಿಗೆ ದೊರೆ ಕೌಶಿಕನಿಂದ ತೊಂದರೆಯಾದಿತ್ತೆಂದು ಭಾವಿಸಿದ ಅಕ್ಕಮಹಾದೇವಿ ಕೌಶಿಕನನ್ನು ಮದುವೆಯಾದಳು. ಆದರೆ ಅವಳ ಸಂಸಾರಿಕ ಜೀವನ ಸುಖಕರವಾಗಿರಲಿಲ್ಲ. ಏಕೆಂದರೆ ಅವಳು ತನ್ನ ಗುರು ಲಿಂಗ ಜಂಗಮ ಪೂಜೆಗೆ ಯಾವುದೇ ರೀತಿಯ ತೊಂದರೆ ಉಂಟಾಗದಂತೆ ನೋಡಿಕೊಳ್ಳಬೇಕೆಂದು ಷರತ್ತನ್ನು ಹಾಕಿದ್ದಳು. ದೊರೆ ಕೌಶಿಕನಿಗೆ ಇದು ಸರಿ ಕಾಣಲಿಲ್ಲ. ಅವನು ಸದಾ ಸುಖಲೋಲೋಪನಾಗಿ ಕಾಮಾಂಧಕಾರದಲ್ಲಿ ಮುಳುಗಿದ್ದಿದ್ದರಿಂದ ಮಹಾದೇವಿಯ ಸದಾ ಕಾಲದ ಅಧ್ಯಾತ್ಮಿಕ ಧಾರ್ಮಿಕ ಜೀವನ, ಲಿಂಗ ಪೂಜೆ, ಸದಾ ಕಾಲ ಜಪ ಮಣಿಯನ್ನು ಹಿಡಿದು ಶಿವಧ್ಯಾನ ಮಾಡುತ್ತಿರುವುದು, ಇವಾವ್ಯೂದು ಅರಹನಿಗೆ ಸರಿಕಾಣಲಿಲ್ಲ.

ಮಹಾದೇವಿಯ ಭಕ್ತಿಭಾವ ಅಧ್ಯಾತ್ಮಿಕ ಚಿಂತನೆ ಇವು "ಶರಣ ಸತಿ ಲಿಂಗ ಪತಿ" ಸ್ವರೂಪದ್ದಾಗಿದ್ದು ಮುಂದೆ ತನ್ನ ಕುಲದ ಆರಾಧ್ಯ ದೈವನಾದ ಚೆನ್ನಮಲ್ಲಿಕಾರ್ಜುನನೆ ತನ್ನ ಪತಿ ಎಂದು ಭಾವಿಸಿದ ಅಕ್ಕಮಹಾದೇವಿಯು ಅನಂತರ ಮಾಡಿದ ಉಗ್ರ ತಪಸ್ಸು, ಸಾಧನೆ, ಸಿದ್ದಿ ಇವುಗಳನ್ನು ಯಾರಿಗಾದರೂ ಆಶ್ಚರ್ಯ ತರುವಂಥಾಹದ್ದು ಮಹಾದೇವಿಯು ರಾಜ್ಯದಾದ್ಯಂತ

ಸಂಚರಿಸುತ್ತ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿ ಜಪ ಮಾಡುತ್ತ ಬಸವೇಶ್ವರರ ತಪೋಭೂಮಿಯಾಗಿ ಆಗಲೇ ಹೆಸರು ಗಳಿಸಿದ್ದ ಕಲ್ಯಾಣಕ್ಕೆ ಬಂದರು. ಅಲ್ಲಿ ಸಾಕಷ್ಟು ಕಾಲ ಇದ್ದುಕೊಂಡಳು.

ಕಲ್ಯಾಣದಲ್ಲಿ ನಡೆಯುತ್ತಿದ್ದ ಶಿವಶರಣರ ಗೋಷ್ಠಿಗೆ ಪ್ರತಿದಿನ ತಪ್ಪದೆ ಹಾಜರಾಗುತ್ತಿದ್ದಳು. ಹೀಗೆ ಶಿವಶರಣರ ಗೋಷ್ಠಿ ನಡೆಯುತ್ತಿದ್ದ ಅನುಭವ ಮಂಟಪವು ಮುಂದೆ ಅಕ್ಕಮಹಾದೇವಿಗೆ ದೇವಾಲಯದ ಸ್ವರೂಪವಾಗಿ ಸಾಕ್ಷ್ಯಾತ ಪರಶಿವನ ಸ್ಥಾನವಾಗಿ ಗೋಚರಿಸಿತ್ತು. ಹೀಗೆ ಅನುಭವ ಮಂಟಪದಲ್ಲಿ ಅಕ್ಕಮಹಾದೇವಿಗೂ ಅಲ್ಲಮಪ್ರಭುವಿಗೂ ನಡೆದ ಸಂಭಾಷಣೆ, ಚಿಂತನಮಂಥನಗಳ ನಿರೂಪಣೆಯು 'ಶೂನ್ಯ ಸಂಪಾದನೆ' ಎಂಬ ಗ್ರಂಥದಲ್ಲಿ ನಮಗೆ ದೊರಕುತ್ತದೆ. ಅವಳ ಧಾರ್ಮಿಕ ಸ್ವಭಾವವನ್ನು, ವಾಕ್ಸ್ ಪ್ರತಿಭೆಯನ್ನು ಕಂಡ ಕಲ್ಯಾಣದ ಶಿವಶರಣರೆಲ್ಲ ಅವಳಲ್ಲಿ ಅಪೂರ್ವ ಗೌರವಗಳನ್ನು ತೋರಿದರು. ಬಸವಣ್ಣನವರು ಮಹಾದೇವಿಯವರನ್ನು ತನ್ನ ಅಕ್ಕನನ್ನಾಗಿ ಅಂಗೀಕರಿಸಿದರು. ಹೀಗಾಗಿ ಅಂದಿನಿಂದ ಮಹಾದೇವಿಯು ಅಕ್ಕಮಹಾದೇವಿಯಾದಳು. ಇದಕ್ಕೆ ಪ್ರತಿಯಾಗಿ ಅಕ್ಕಮಹಾದೇವಿಯು ಸಹ ಬಸವೇಶ್ವರರನ್ನು ತಮ್ಮ ಅಣ್ಣನೆಂದು ಕಂಡುಕೊಂಡರು.

ಅಕ್ಕಮಹಾದೇವಿಯು ತನ್ನ ಬಾಳಿನ ಕೊನೆಯ ದಿನಗಳನ್ನು ಅಲ್ಲಮಪ್ರಭುಗಳಂತೆ ಶ್ರೀಶೈಲ್ಯದ ಕದಳಿ ವನದಲ್ಲಿ ಅವಳ ಆರಾಧ್ಯ ದೈವವಾದ ಚೆನ್ನಮಲ್ಲಿಕಾರ್ಜುನನ ಧ್ಯಾನದಲ್ಲಿ ಕಳೆದಳು. ಹರಿಹರಿ ಕವಿಯು "ಮಹಾದೇವಿ ಅಕ್ಕನ ರಗಳೆ" ಪ್ರಭುಲಿಂಗ ಲೀಲೆ (ಚಾಮರಸ) ಮುಂತಾದ ಕೃತಿಗಳಲ್ಲಿ ಶಿವಶರಣೆ ಅಕ್ಕಮಹಾದೇವಿಯ ಜೀವನಕ್ಕೆ ಸಂಬಂಧಿಸಿಧ ವಿವರಗಳು ದೊರೆಯುತ್ತವೆ. ಹಾಗೆಯೇ ಆಕೆಯ ವಚನಗಳಿಂದಲೂ ಅವಳ ಜೀವನದ ಕೆಲವು ಅಂಶಗಳು ವ್ಯಕ್ತವಾಗುತ್ತವೆ ಎಂದು ತಿಳಿದು ಬರುತ್ತದೆ.

## ಅಂಬಿಗರ ಚೌಡಯ್ಯಾ

ಬಸವಣ್ಣನವರ ಕಾಲದ ವಚನಕಾರರಲ್ಲಿ ಅತ್ಯಂತ ವಿಶಿಷ್ಟನಾದ ಶಿವಶರಣ ಅಂಬಿಗರ ಚೌಡಯ್ಯನು ಹೆಸರು ಗಳಿಸಿದನು. ಇತನ ಹೆಸರೇ ಸೂಚಿಸುವಂತೆ ಇತನು ವೃತ್ತಿಯಿಂದ ಅಂಬಿಗನಾಗಿದ್ದರು ಪ್ರವೃತ್ತಿಯಲ್ಲಿ ಶಿವಶರಣರು ಆಗಿದ್ದನು. ಹನ್ನೆರಡನೇ ಶತಮಾನದ ಶಿವಶರಣರಲ್ಲಿಯೇ ಅಂಬಿಗರ ಚೌಡಯ್ಯ ಅತ್ಯಂತ ವಿಶಿಷ್ಟ ಸ್ವಭಾವದವನು ಎಂದು ಹೇಳಬಹುದು. ಹೊಗಳಿಕೆಗಳು ಸ್ವಯಂ ಪ್ರಶಂಸೆ ಮಾಡಿಕೊಳ್ಳುವುದೆಂದರೆ ಇತನಿಗೆ ಇಷ್ಟವೆಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ.

ಅಂಬಿಗರ ಚೌಡಯ್ಯನವರ ವಚನಗಳ ವಸ್ತು, ಭಾಷೆ, ಶೈಲಿ ಇವುಗಳನ್ನು ಗಮನಿಸಿದರೆ ಅವನೊಬ್ಬ ಕೆಚ್ಚೆದೆಯ, ನಿಷ್ಠುರ ಪ್ರಕೃತಿಯ, ಶೀಘ್ರ ಕೋಪಿತನಾದ ವಚನಕಾರ ಎಂಬುವುದು ಸ್ಪಷ್ಟವಾಗುತ್ತದೆ. ಅವನು ನ್ಯಾಯ ನಿಷ್ಠುರ, ದಯಾಪರ, ಆದರೆ ದಾಕ್ಷಿಣ್ಯಪರನಲ್ಲ ನೇರ ನಿಷ್ಠುರವಾದಿ ಎದುರಿಗೆ ಕಂಡಿದ್ದನ್ನು ತನಗೆ ಅನ್ನಿಸಿದ್ದನ್ನು ಯಾವ, ಯಾರ, ಅಂಜಿಕೆ ಇಲ್ಲದೆ ಬಹಿರಂಗಪಡಿಸುವವನಾಗಿದ್ದನು. ಅವನ ಮಾತಿನ ವಚನದ ಬಹುಭಾಗ ಹರಿತವಾದುದ್ದು ಮತ್ತು ಸಂಸ್ಕಾರ ದೂರವಾದ್ದುದ್ದು. ಅವನು ಮೃದುವಾಗಿ ಮಾತನಾಡುವುದು ತುಂಬಾ ಅಪೂರ್ವ ಮತ್ತು ಅಪರೂಪವು ಹೌದು. "ಕೇಳಿರಯ್ಯಾ ಮಾನವರೇ ಶೀಲದಲ್ಲಿ ಸಂಪನ್ನರಾದವರು ನೀವೂ ಕೇಳಿರೊ" "ನನಗೊಬ್ಬ ರಂಜಲು ಸೇರಿದಂದು ಶ್ಮಚಿತನದಲ್ಲಿ ಬದುಕುವ ಮಾತಿನ ಭುಂಜಕರು ನೀವೂ ಕೇಳಿರೊ", ಪುರುಷಾರ್ಥಗಳನ್ನರಿಯದೆ ಕೆಟ್ಟ ನರ ಕುರಿಗಳು ನೀವೂ ಕೇಳಿರೊ ಎಂದು ಆರಂಭವಾಗಿ ಮೆಟ್ಟಿ ದೊಡ್ಡ ಪಾದರಕ್ಷೆಯ ತಕ್ಕೊಂಡು ಲಟಪಟನೆ ಹೊಡೆ ಎಂದ ನಮ್ಮ ಅಂಬಿಗರ ಚೌಡಯ್ಯಾ ಹೀಗೆ ಚೌಡಯ್ಯಾನ ವಚನವೊಂದರಲ್ಲಿ ವ್ಯಕ್ತವಾಗುತ್ತದೆ.

ಅಂಬಿಗರ ಚೌಡಯ್ಯನ ವಚನಗಳಿಂದ ನಮಗೆ ಕಂಡು ಬರುವ ಸಮಾಜದ ಅವ್ಯವಸ್ಥೆಯ ಚಿತ್ರ ಬೇರೆಯವರ ವಚನಗಳಲ್ಲಿ ಅಧಿಕ ಮಟ್ಟಿಗೆ ಕಾಣಸಿಗದು ಅವರ ವಚನಗಳು ಅನರ್ಥ ಸಾಧಕವಾದ ಕೋಪದಿಂದ ಹೊಮ್ಮಿದ್ದವು ಅಲ್ಲ. ಸದರ್ಥ ಸಾಧಕವಾದ ಸತ್ಕೋಪದಿಂದ ಹೊಮ್ಮಿದವು. ಸಮಾಜದ ಸ್ಮಧಾರಣೆ ಅಂಬಿಗರ ಚೌಡಯ್ಯನ ವಚನಗಳ ಹಿಂದಿನ ಉದ್ದೇಶ, ಧ್ಯೇಯ ಎಂಬುದಾಗಿ ವಿದ್ವಾಂಸರು ವಿಶ್ಲೇಷಿಸುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಈ ಬಗ್ಗೆ ದಿಟ್ಟತನ, ವ್ಯಗ್ರತೆ ಕಂಡುಬರುವುದು ಬಹುಶಃ ಒಬ್ಬರಲ್ಲಿಯೇ ಎಂದು ತೋರುತ್ತದೆ.




ಶರಣ ಸ್ಮಾರಕಗಳು ಪರಂಪರೆಯನ್ನು ಮತ್ತು ಅವುಗಳ ದೈನಂದಿನ ಕಾರ್ಯ ಚಟುವಟಿಕೆಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಿದಾಗ ೧೨ನೇ ಶತಮಾನದ ಶಿವಶರಣರು ಹಾಕಿ ಕೊಟ್ಟ ಮಾರ್ಗದಲ್ಲಿ ಮತ್ತು ಶರಣರು ಹಾಕಿ ಕೊಟ್ಟ ಮಾರ್ಗದಲ್ಲಿ ಮತ್ತು ಶರಣರ ವಚನ ಕ್ರಾಂತಿಗೆ ಬದ್ಧವಾಗಿ ಮತ್ತು ಆ ಸಿದ್ಧಾಂತವನ್ನು ಅನೂಚನವಾಗಿ ಪಾಲಿಸುತ್ತಿವೆಯೇ? ಎಂಬ ಪ್ರಶ್ನೆ ಉದ್ಭವಿಸ್ತುದೆ.

ಶರಣರ ದೈನಂದಿನ ಜೀವಾಳಿಕೆ ಕಾಯಕ. ಸುಭದ್ರವಾದ ಸಮಾಜ ಮತ್ತು ಅರ್ಥವ್ಯವಸ್ಥೆಗೆ ಅದೇ ಮೂಲ. ಎಲ್ಲಾ ಭೋಗಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡಿರುವ ರಾಜಯೋಗವೆ ಕಾಯಕ ಯೋಗ. ಅದರಂತೆ ತ್ಯಾಗ, ದಾನ ಸಮಾನ ಹಂಚಿಕೆ ಅಹಂಕಾರ ವರ್ಜನ ಮತ್ತು ಶರಣಾಗತಿ ಇವು ಶರಣ ಸ್ಮಾರಕಗಳ ಲಕ್ಷಣಗಳು. ಭಾವ ಶುದ್ಧಿಮಾತ್ರವಲ್ಲ, ಸಾಮಾಜಿಕ ಕ್ಷೇಮವು ಅದರ ಗುರಿಯಾಗಬೇಕು. ಕಾಯಕ ಜೀವನ ನೀತಿ ಮಾರ್ಗಕ್ಕೆ ಒಂದು ಮಹತ್ವಪೂರ್ಣವಾದ ಮೌಲ್ಯವಾಗಬೇಕು. ಜೀವನವೆಂಬ ಜ್ಯೋತಿಗೆ ಕಾಯಕ ಮತ್ತು ಶರಣ ಸ್ಮಾರಕಗಳು ಬತ್ತಿಯಾದರೆ ನೀತಿ ಇದರ ಎಣ್ಣೆ ಇದ್ದಂತೆ. ಪ್ರಪಂಚದ ಪ್ರಕ್ಷುಬ್ದ ಪರಿಸ್ಥಿತಿಗೆ ನೈತಿಕ ಮೌಲ್ಯಗಳ ಪತವನವೆ ಮೂಲ ಕಾರಣ. ನಡೆನುಡಿಗಳು ಒಂದಾಗಬೇಕು. ನೀತಿಯೇ ಪ್ರಥಮ ಸೋಪಾನ, ಆಗ ಮಾತ್ರ ಜೀವನ ಅರ್ಥಪೂರ್ಣ ಮತ್ತು ಪರಿಪೂರ್ಣ.

"ನಡೆಯೊಳಗೆ ನುಡಿ ತುಂಬಿ,  
ನುಡಿಯೊಳಗೆ ನಡೆ ತುಂಬಿ  
ನಡೆ ನುಡಿ ಎರಡನ್ನು ಪರಿಪೂರ್ಣ ತುಂಬಿ  
ಲಿಂಗದ ಕೂಡಬಲ್ಲಾತನೇ ಶರಣ ನೋಡಾ"  
ಎನ್ನುವ ವಚನ ಇಂದು ನಮಗೆ ಸ್ಫೂರ್ತಿಯಾಗಲಿ.

ಮೂಡನಂಬಿಕೆ, ಮಾಯಾ, ಮಾಟ ಮಂತ್ರಗಳೆಂಬ ಅಸ್ತ್ರಗಳನ್ನು ಉಪಯೋಗಿಸಿ ಧರ್ಮದ ಹೆಸರಿನಲ್ಲಿ ಹಿಂಸೆಗೆ ಕಾರಣರಾಗಿರುವುದು ವಿಚಾರದ ಸಂಗತಿ. ಶರಣರು ಬಯಸಿದ ಜಾತಿ ರಹಿತ ಮತ್ತು ವರ್ಗರಹಿತ ಸಮಾಜದ ನಿರ್ಮಾಣ ಶರಣ ಸ್ಮಾರಕಗಳ ಅವಶ್ಯಕ ಕಥೆಗಳಾಗಬೇಕು. ನಿಜ ಅರ್ಥದಲ್ಲಿ ಶರಣರು ಪ್ರತಿಪಾದಿಸಿದ ಕಾಯಕ, ಜಾತ್ಯಾತೀತ ತತ್ವಗಳನ್ನು ಕಾರ್ಯರೂಪಗೊಳಿಸಲು ಶರಣ ಸ್ಮಾರಕಗಳು ಇನ್ನೂ ಹೆಚ್ಚಿನ ರೂಪದಲ್ಲಿ ಶ್ರಮಿಸಿದಾಗ ಸಮಾಜದಲ್ಲಿ ಎಲ್ಲರ ಪ್ರೀತಿ ಗಳಿಸಲು ಸಾಧ್ಯ.

ಅನ್ಯ ಧರ್ಮಿಯರನ್ನು ಗೌರವಿಸುತ್ತ ತನ್ನ ಧರ್ಮ ಸಂಘಟನೆಗೆ ಒತ್ತು ನೀಡಬೇಕು. ಸಮಾನತೆ, ಅಸ್ಪೃಶ್ಯತೆ, ತಾರತ್ತಮ್ಯಾ ಭಾವನೆ ಬಡವ ಶ್ರೀಮಂತಿಕೆಯ ಅಂತರವನ್ನು ನಿರ್ಮೂಲನೆಗೊಳಿಸುವುದು ಇವುಗಳ ಮೂಲ ಉದ್ದೇಶವಾಗಬೇಕು. ೧೨ನೇ ಶತಮಾನದಲ್ಲಿ

ರಚಿತವಾದ ಶಿವಶರಣರ ವಚನ ಭಂಡಾರ ರಕ್ಷಿಸುವುದು ಶರಣ ಸ್ಮಾರಕಗಳ ಆದ್ಯ ಕರ್ತವ್ಯಗಳಲ್ಲೊಂದಗಲಿ ವೈಚಾರಿಕ ವೈಜ್ಞಾನಿಕ ಪ್ರಜ್ಞೆಗೆ ಪೂರಕವಾಗುವ ಕಾರ್ಯಕ್ರಮಗಳು ಹೊರಹೊಮ್ಮಲಿ. ಸಂತೋಷದ ವಿಷಯವೆಂದರ ಬೀದರ ಜಿಲ್ಲೆಯ ಶರಣ ಸ್ಮಾರಕಗಳು ತಮ್ಮದೇ ಆದ ರೀತಿಯಲ್ಲಿ ಶರಣರ ತತ್ವ ಸಿದ್ಧಾಂತಗಳನ್ನು ಅಳವಡಿಸಿಕೊಂಡಿವೆ. ಕರ್ನಾಟಕದ ಮೂಲೆ ಮೂಲೆಗಳಲ್ಲಿ ಶರಣರ ಸ್ಮಾರಕಗಳು ಕೀರ್ತಿ ಪಥಕ್ಕೆ ಹಾರಿಸಲೇಂದು ಆಶಿಸೋಣ. ಶರಣರು ಪ್ರತಿಪಾದಿಸಿದ ಸಮಾಜವಾದ ಮತ್ತು ಧರ್ಮ, ಸಮಾಜದ ಸರ್ವಜನಾಂಗಗಳ ಅಭಿವೃದ್ಧಿಗೆ ಪೂರಕವಾಗುವ ನಿಟ್ಟಿನಲ್ಲಿ ಎಲ್ಲಾ ಶರಣು ಬಂಧುಗಳು ಶ್ರಮವಹಿಸಲೆಂದು ನಮ್ಮ ಸದಾಶಯ.

೧೨ನೇ ಶತಮಾನದಲ್ಲಿ ಶರಣರ ಸಾಹಿತ್ಯದ ಮೂಲಕ ಬೆಳೆದುಬಂದ ವಚನ ಸಾಹಿತ್ಯವು ಜನಪ್ರಿಯ ಪ್ರಕಾರವಾಗಿ ಬೆಳೆದುಕೊಂಡು ಬಂದಿದೆ. ಮುಂದೆ ಅನುಭಾವ ಕವಿಗಳ ವಿಚಾರದಲ್ಲಿ ವಿಶಿಷ್ಟ ರೂಪ ಪಡೆದು 'ತತ್ವ ಪದ' ವಾಗಿ 'ಭಜನ ಪದ' ವಾಗಿ ಜನಪ್ರಿಯತೆಯನ್ನು ಪಡೆದಿದೆ ಎಂದು ಹೇಳಲಾಗುತ್ತದೆ. ಈ ರೀತಿಯಾಗಿ ಶರಣ ಸಮ್ಮಾರಕಗಳು ಶರಣರ ವಿಚಾರ ಆಚಾರ ಸಂಸ್ಕೃತಿಯನ್ನು ಬೆಳೆಸುವಲ್ಲಿ ಸಮಕಾಲೀನ ಸಾಹಿತ್ಯದ ರಚನೆಯು ಚರಿತ್ರೆ ರಚಿಸಲು ಸಹಾಯಕಾರಿಯಾಗಿವೆ.

# ಅನುಬಂಧ

| ಅ) | ಫೋಟೋ ವಿವರಣೆ | ಸ್ಥಳ |
|---|---|---|
| ೧) | ಕರಿಬಸವೇಶ್ವರರಿಂದ ಯಂಕಮ್ಮಾ ತಾಯಿಯ ಪರೀಕ್ಷೆ | (ಹುಡಗಿ) |
| ೨) | ಮಡಿವಾಳೇಶ್ವರ ಗರ್ಭ ಗುಡಿ | (ಚಿಟಗುಪ್ಪಾ) |
| ೩) | ಕರಿಬಸವೇಶ್ವರರ ಗದ್ದುಗೆ | (ಹುಡಗಿ) |
| ೪) | ಮಡಿವಾಳೇಶ್ವರರ ಮುಖ್ಯ ದ್ವಾರ | (ಚಿಟಗುಪ್ಪಾ) |
| ೫) | ಲಿಂಗಾಯಪ್ಪನ ದೇವಸ್ಥಾನ | (ಮನ್ನಳ್ಳಿ) |
| ೬) | ಲಿಂಗಾಯಪ್ಪನವರ ಗದ್ದುಗೆ | (ಮನ್ನಳ್ಳಿ) |
| ೭) | ಲಿಂಗಾಯಪ್ಪನವರ ದೇವಸ್ಥಾನದ ದ್ವಾರ | |
| ೮) | ಬಸವೇಶ್ವರ ದೇವಸ್ಥಾನದ ಮಹಾದ್ವಾರ | (ಬಸವಕಲ್ಯಾಣ) |
| ೧೧) | ಅಲ್ಲಮ ಪ್ರಭುಗಳ ಮಹಾದ್ವಾರ | (ಬಸವಕಲ್ಯಾಣ) |
| ೧೩) | ಅಲ್ಲಮ ಪ್ರಭುಗಳ ಗದ್ದುಗೆ | (ಬಸವಕಲ್ಯಾಣ) |
| ೧೫) | ಹರಳಯ್ಯನವರ ಗವಿ | (ಬಸವಕಲ್ಯಾಣ) |
| ೧೭) | ಅಕ್ಕನಾಗಮ್ಮನವರ ಮೂರ್ತಿ | (ಬಸವಕಲ್ಯಾಣ) |
| ೧೯) | ಬಸವಣ್ಣನವರ ಅರುವಿನ ಮನೆ | (ಬಸವಕಲ್ಯಾಣ) |
| ೨೦) | ಮಡಿವಾಳೇಶ್ವರರ ಗವಿ | (ಬಸವಕಲ್ಯಾಣ) |
| ೨೮) | ಅಲ್ಲಮಪ್ರಭುಗಳ ಭಾವಚಿತ್ರ | (ಬಸವಕಲ್ಯಾಣ) |
| ೪೧) | ಕರಿಬಸವೇಶ್ವರರ ಭಾವಚಿತ್ರ | (ಬಸವಕಲ್ಯಾಣ) |
| ೫೧) | ಯೆಂಕಮ್ಮ ತಾಯಿಯ ಗದ್ದುಗೆ | (ಹುಡಗಿ) |
| ೫೨) | ಯೆಂಕಮ್ಮ ತಾಯಿಯ ದೇವಸ್ಥಾನ | (ಹುಡಗಿ) |
| ೫೬) | ಮೂಳಿಗೆ ಮಾರಯ್ಯನ ಭಾವಚಿತ್ರ | (ಮೊಳಕೇರಾ) |
| ೫೭) | ಬಕ್ಕಪ್ರಭುಗಳ ಭಾವಚಿತ್ರ | (ಕರಕ್ಕನಹಳ್ಳಿ) |
| ೫೮) | ಬಕ್ಕಪ್ರಭುಗಳ ಗದ್ದುಗೆ | (ಕರಕ್ಕನಹಳ್ಳಿ) |
| ೫೯) | ಚೆನ್ನಬಸಬ ಪಟ್ಟದೇವರ ಭಾವಚಿತ್ರ | (ಭಾಲ್ಕಿ) |

## ಆ) ಗ್ರಂಥ ಋಣ


೧) ಬೀದರ ಜಿಲ್ಲಾ ದರ್ಶನ
ಡಾ. ಸೋಮನಾಥ ಯಾಳವಾರ
ಡಾ. ಪ್ರೇಮಾ ಸಿರ್ಸೆ

೨) ಬೀದರ ಜಿಲ್ಲೆಯ ವೀರಶೈವ ಮಠಗಳು ಮತ್ತು ಸಾಮಾಜಿಕ ಪರಿವರ್ತನೆ
ಇಂದುಮತಿ ಪಿ. ಪಾಟೀಲ

೩) ಬೀದರ ಜಿಲ್ಲೆಯ ಅರಸು ಮನೆತನಗಳು
ಇಂದುಮತಿ ಪಿ. ಪಾಟೀಲ

೪) ಅಂಬಿಗರ ಚೌಡಯ್ಯ
ಡಾ. ಎಸ್. ವಿದ್ಯಾಶಂಕರ

೫) ಕಾಯಕ ವೀರ ಮೋಳಿಗೆ ಮಾರಾಯ್ಯ
ಹೆಚ್. ಕಾಶಿನಾಥ ರೆಡ್ಡಿ

೬) ಶಿವಶರಣೆಯರು
ವಾಣಿಶ್ರೀ ಎಸ್. ಪಾಟೀಲ

೭) ಸಮುದಾಯ ಮತ್ತು ಸಂಸ್ಕೃತಿ
ಡಾ. ಬಸವರಾಜ ಸಬರದ

೮) ಬಸವ ಯುಗದ ವಚನೇತರ ಸಾಹಿತ್ಯ
ಡಾ. ಕೆ. ರವೀಂದ್ರನಾಥ

